# ಶ್ರೀ ವಾದಿರಾಜತೀರ್ಥ ಪೂಜ್ಯಚರಣ ವಿರಚಿತ

# ಕೀಚಕ ವಧೆ

# (ಶ್ರೀ ಭೀಮಸೇನ ವಿಜಯ)

ಕನ್ನಡ ವ್ಯಾಖ್ಯಾನ ಸಹಿತ



ವ್ಯಾಖ್ಯಾನಕಾರರು:ಕೀರ್ತಿಶೇಷ ಮಾಧ್ವಭೂಷಣ ದಿ|| ಶ್ರೀ ಬಿ.ಭೀಮರಾವ್

ಪ್ರಕಾಶಕರು : ಶ್ರೀ ಸರ್ವಜ್ಞಾಚಾರ್ಯ ಸೇವಾ ಸಂಘ,ದಾವಣಗೆರೆ

# ಶ್ರೀಃ

ಕೃಷ್ಣಾಯ ವಾಸುದೇವಾಯ ಹರಯೇ ಪರಮಾತ್ಮನೇ ।
ಪ್ರಣತಕ್ಲೇಶನಾಶಾಯ ಗೋವಿಂದಾಯ ನಮೋ ನಮಃ ॥

ಅಭ್ರಮಂ ಭಂಗರಹಿತಂ ಅಜಡಂ ವಿಮಲಂ ಸದಾ ।
ಆನಂದತೀರ್ಥಮತುಲಂ ಭಜೇ ತಾಪತ್ರಯಾಪಹಮ್ ॥

ತಪೋವಿದ್ಯಾವಿರಕ್ತ್ಯಾದಿ ಸದ್ಗುಣೌಘಾಕರಾನಹಮ್ ।
ವಾದಿರಾಜಗುರೂನ್ ವಂದೇ ಹಯಗ್ರೀವದಯಾಶ್ರಯಾನ್ ॥

ಶ್ರೀವಾದಿರಾಜಸ್ವಾಮಿಗಳಿಂದ ರಚಿತವಾದ

# ಕೀಚಕವಧೆ

ರಾಗ : ಭೈರವಿ ತಾಳ : ಆಟ

**ಭೀಮಸೇನ ಕಾಮಿನಿಯಾದನು ॥ ಪಲ್ಲವಿ ॥**

**ಭೀಮಸೇನ ಕಾಮಿನಿಯಾಗಲು**
**ಪ್ರೇಮದ ಸತಿಯ ಕಾಮಿಸಿದವನ**
**ಝಾಮರಾತ್ರಿಗೆ ಸೀಳುವೆನೆನ್ನುತ**
**ಸಾಮಜವರದನ ಪಾಡುತಲಿ[೧] ॥ ಅನುಪಲ್ಲವಿ ॥**

---

೧. ೨೩ ನುಡಿಗಳುಳ್ಳ ಈ ದೇವರನಾಮವು ಶ್ರೀಮನ್ಮಹಾಭಾರತದ ವಿರಾಟಪರ್ವದಲ್ಲಿ ಉಕ್ತವಾದ 'ಕೀಚಕವಧೆ'ಯ ಕಥೆಯನ್ನು ನಿರೂಪಿಸುತ್ತದೆ. ಶ್ರೀಮಹಾಭಾರತ ಪ್ರವಚನ ಶ್ರವಣಾದಿಗಳನ್ನು ವಿರಾಟಪರ್ವದಿಂದ ಆರಂಭಿಸುವ ಸಂಪ್ರದಾಯವಿದೆ. ಶ್ರೀಭಾರತೀಪತಿಗಳಾದ ಶ್ರೀವಾಯುದೇವರು ಸರ್ವಲೋಕಗುರುಗಳು ; ಉಪದೇಶಕರೆಂಬ ಅನ್ಯ ಸರ್ವ ಗುರುಗಳಲ್ಲಿ ಅವರ ಚಿತ್ತನಿಯಾಮಕರಾಗಿ ನಿಂತು, ಸರ್ವಜೀವರಿಗೆ ಸ್ವಯೋಗ್ಯಸರ್ವವಿಧ ಜ್ಞಾನೋಪದೇಶಕರು - ಇವರೇ. ಗುರುಭಕ್ತಿಯಿಲ್ಲದೇ, ಮುಕ್ತಿಯೋಗ್ಯ ಜೀವರಿಗೆ, ಹರಿಭಕ್ತಿಯು ಲಭಿಸದು ; ಹರಿಭಕ್ತಿಯಿಲ್ಲದೇ ಶ್ರೀಹರಿಪ್ರಸನ್ನತೆಯಿಲ್ಲ ; ಅದಿಲ್ಲದೇ ಮೋಕ್ಷವಿಲ್ಲ. ಆದ್ದರಿಂದಲೇ ಜಗದ್ಗುರುಗಳಾದ ಶ್ರೀವಾಯುದೇವರ ದ್ವಿತೀಯಾವತಾರನಾದ

**ಅರ್ಥ:—** ಭೀಮಸೇನ = ಭೀಮಸೇನನು, ಕಾಮಿನಿಯಾದನು = ಸ್ತ್ರೀವೇಷ-ವನ್ನು ಧರಿಸಿದನು (ವಿಷಯಾಸಕ್ತನಿಗೆ ಮಾತ್ರ ಸ್ತ್ರೀತ್ವ = ಅನ್ಯರಿಗಿಲ್ಲ. ಅದಿಲ್ಲದ ಭೀಮ-ಸೇನನಿಗೆ ಎಲ್ಲಿಂದ ಸ್ತ್ರೀತ್ವ ? ) ಪ್ರೇಮದ ಸತಿಯ = ಪ್ರಿಯಪತ್ನಿಯಾದ ದ್ರೌಪದಿಯನ್ನು, ಕಾಮಿಸಿದವನ = (ಅಂಗಸಂಗವನ್ನಪೇಕ್ಷಿಸಿದ) ಕೀಚಕನನ್ನು, ಝಾಮರಾತ್ರಿಗೆ = ರಾತ್ರಿ-ಯಾಮದಲ್ಲಿ (ಯಾಮಕಳೆದ ರಾತ್ರಿಕಾಲದಲ್ಲಿ) ಸೀಳುವೆನೆನ್ನುತ = ಸೀಳುವೆನೆಂದು (ಕೊಲ್ಲುವೆನೆಂದು), ಭೀಮಸೇನ = ಭೀಮಸೇನನು, ಕಾಮಿನಿಯಾಗಲು = ಸ್ತ್ರೀವೇಷ-ಧಾರಿಯಾಗಲು (ಅಜ್ಞಾತವಾಸದಲ್ಲಿ ಇದ್ದ ಕಾರಣ ನಿಜಸ್ವರೂಪವನ್ನು ಪ್ರಕಟಿಸದಿರಲು), ಸಾಮಜವರದನ = ಗಜೇಂದ್ರವರದನಾದ ಶ್ರೀಕೃಷ್ಣನನ್ನು ಪಾಡುತಲಿ = ಸ್ತುತಿಸುತ್ತ (ಕಾಮಿನಿಯಾದನು.)[೧]

---

ಶ್ರೀಭೀಮಸೇನನಲ್ಲಿ ಆತನೇ ಜೀವೋತ್ತಮನೆಂಬ ಜ್ಞಾನವೂ, ಶ್ರೇಷ್ಠ ಭಕ್ತಿಯೂ ಉಂಟಾಗಿ, ಶ್ರೀವಿಷ್ಣು ಭಕ್ತಿಯ ಉದಯವಾಗಲು ಮೊದಲು 'ಕೀಚಕವಧೆ'ಯ ಕಥಾಶ್ರವಣವಾಗಲೆಂದು ಈ ಸಂಪ್ರದಾಯ-ಪ್ರವರ್ತಕರ ಉದ್ದೇಶವಾಗಿರುತ್ತದೆ.

ಕೀಚಕನು ವಿಷಯಾಸಕ್ತ ಪುರುಷರನ್ನೂ 'ವಿಷಯಾಸಕ್ತಿ'ಯನ್ನೂ ಪ್ರತಿನಿಧಿಸುತ್ತಾನೆ. ಅನಿಷಿದ್ಧ ಕಾಮಗಳನ್ನು ಸೇವಿಸಬಹುದಾದರೂ, ಸಂಸಾರಕ್ಕೆ ಮೂಲಕಾರಣವಾದ 'ವಿಷಯಾಸಕ್ತಿ'ಯನ್ನು ತ್ಯಜಿಸಿ, (ವಿಷಯಭೋಗಲಾಲಸೆಯನ್ನು ಬಿಟ್ಟು), ಶ್ರೀಹರಿದತ್ತ ಭೋಗಗಳನ್ನು ಆಸಕ್ತಿರಹಿತನಾಗಿ ಭೋಗಿಸಿ, ಅದರಿಂದಲೂ ಶ್ರೀಹರಿಪ್ರೀತಿಯನ್ನೇ ಕೋರಿ, ಭೋಗ್ಯ ವಸ್ತುಗಳ ಪ್ರಾಪ್ತಿಗಾಗಿ ಅತಿಯತ್ನಾದಿಗಳಲ್ಲಿ ತೊಡಗದಿರುವುದೇ ವೈರಾಗ್ಯವು ; ವೈರಾಗ್ಯವು ಇಲ್ಲದೇ ಜ್ಞಾನವಿಲ್ಲ— ಅದಿಲ್ಲದೇ ಹರಿಗುರುಗಳಲ್ಲಿ ಭಕ್ತಿಯಿಲ್ಲ. ನಾನಾಪರಿಯ ಭೋಗ್ಯ ವಿಷಯಗಳಲ್ಲಿ 'ಸ್ತ್ರೀ'ಯು ಅತ್ಯಾಕರ್ಷಕ — (ಸ್ತ್ರೀಯರಿಗೆ ಪುರುಷನು ಆಕರ್ಷಕ). ಅತ ಏವ 'ಸ್ತ್ರ್ಯಾದಿ' ವಿಷಯಗಳ ಹಂಬಲವನ್ನು ತ್ಯಜಿಸಬೇಕೆಂದು ಪದೇ ಪದೇ ಹೇಳಲಾಗುತ್ತದೆ. ನಿಷಿದ್ಧ ವಿಷಯಗಳ (ಪರಸ್ತ್ರೀ ಮೊದಲಾದ) ಆಸೆಯು ಸಹ ಅನರ್ಥಕರವು. ಅದಕ್ಕಾಗಿ ನಡೆಸುವ ಯತ್ನ ಮತ್ತು ಅದರ ಸಾಕ್ಷಾತ್ ಭೋಗವು ಅನರ್ಥಕರವೆಂದು ಹೇಳಲೇನು !

ಕೀಚಕನು ಭಾರತೀ ಅವತಾರಳಾದ ದ್ರೌಪದಿಯ ಸಂಗವನ್ನು ಅಪೇಕ್ಷಿಸಿದನು — ಅದಕ್ಕಾಗಿ ದುಷ್ಟಯತ್ನಗಳನ್ನು ಮಾಡಿದನು. ದ್ರೌಪದಿಯು ಪರಸ್ತ್ರೀ ಮಾತ್ರವಲ್ಲ — ಉತ್ತಮ ದೇವತೆಯು, ಜಗದ್ಗುರುಗಳ ಪತ್ನಿಯು. ಈ ಮಹಾಪಾಪದಿಂದ ಶ್ರೀಭೀಮಸೇನ ಹತನಾದನು (ತಮಸ್ಸನ್ನೂ ಹೊಂದಿದನು). ಕೀಚಕನಿಂದ ಪ್ರತಿನಿಧಿಸಲ್ಪಟ್ಟ 'ವಿಷಯಾಸಕ್ತಿ'ಯ ನಿಶ್ಶೇಷನಾಶವು ಶ್ರೀವಾಯುದೇವನಿಂ-ದಲ್ಲದೇ ಅನ್ಯರಿಂದ ಸಾಧ್ಯವಿಲ್ಲ. ಜೀವೋತ್ತಮನಾದ ಈತನ ಕಾಮಜಯಸಾಮರ್ಥ್ಯವು ಸ್ವಾಭಾವಿಕವು, ಅನ್ಯಾದೃಶವು. ಅತ ಏವ ಶ್ರೀ ವಾಯುದೇವನ ಮಹಿಮೆಯನ್ನರಿತು, ಆತನಲ್ಲಿ ಭಕ್ತಿ ಮಾಡಿ, ಆತನ ಅನುಗ್ರಹವನ್ನು ದೊರಕಿಸಿಕೊಳ್ಳುವುದು ಸಕಲ ಮುಮುಕ್ಷುಗಳ ಅವಶ್ಯ ಕರ್ತವ್ಯವಾಗಿದೆ.

೧. ಯಾವುದೇ ಕಾರ್ಯವನ್ನು ಶ್ರೀಹರಿಪೂಜೆಯೆಂದು ತಿಳಿದು, ಶ್ರೀಹರಿಸ್ಮರಣಪೂರ್ವಕ ಆರಂಭಿಸುವುದು ಶ್ರೀಭೀಮಸೇನನ ಸ್ವಭಾವ. 'ಕರಿಷ್ಯಮಾಣಾನಿ ಚ ತಸ್ಯ ಪೂಜಾಂ ಸಂಕಲ್ಪಯಾಮಾಸ ಸ ಶುದ್ಧ ಬುದ್ಧಿಃ' - ಮುಂದಿನ ಕರ್ಮಗಳನ್ನೂ ಶ್ರೀಹರಿಪೂಜೆಯೆಂದು ಸಂಕಲ್ಪಿಸುವ ಶುದ್ಧಾಂತಃಕರಣ ಶ್ರೀಭೀಮಸೇನನದು. (ಶ್ರೀಸುಮಧ್ವವಿಜಯ).

ರಾಜಾಧಿರಾಜನು ಗಜಪುರದಲ್ಲಿ
ಜೂಜನಾಡಿ ತಮ್ಮ ರಾಜ್ಯವನು ಸೋತು
ವಿಜಯಮುಖ್ಯಾನುಜರ ಒಡಗೂಡಿ
ಭುಜಗಶಾಯಿಯ ಭಜಿಸುತ

ಸೂಜಿಮೊನೆಯಷ್ಟು ಗೋಜಿಲ್ಲದೆ ಬೇರೆ
ವ್ಯಾಜದಿಂದ ರೂಪ ಮಾಜಿಕೊಂಡು ಪೋಗೆ
ರಾಜಮತ್ಸ್ಯನೊಳು ಭೋಜನವ ಮಾಡುತ
ಪೂಜಿಸಿಕೊಂಬುದು ಸೋಜಿಗವು ॥ ೧ ॥

**ಅರ್ಥ:—** ರಾಜಾಧಿರಾಜನು = ಯುಧಿಷ್ಠಿರನು, ಗಜಪುರದಲ್ಲಿ = ಹಸ್ತಿನಾವತಿಯಲ್ಲಿ, ಜೂಜನಾಡಿ = (ಪಗಡೆಯಾಟದ) ದ್ಯೂತವನ್ನಾಡಿ, ತಮ್ಮ ರಾಜ್ಯವನ್ನು ಸೋತು = ತಮ್ಮ ರಾಜ್ಯೈಶ್ವರ್ಯಗಳನ್ನೆಲ್ಲ ಸೋತು (ಶಕುನಿಯ ಕಪಟದಿಂದ ಸೋತು), ವಿಜಯಮುಖ್ಯಾನುಜರ ಒಡಗೂಡಿ = ಅರ್ಜುನಾದಿ ಸಹೋದರರಿಂದ ಕೂಡಿ, ಭುಜಗಶಾಯಿಯ ಭಜಿಸುತ = ಶ್ರೀಕೃಷ್ಣನನ್ನು ಧ್ಯಾನಿಸುತ್ತ[೧] ಸೂಜಿಯ ಮೊನೆಯಷ್ಟು ಬೇರೆ ಗೋಜಿಲ್ಲದೆ = ಸೂಜಿಯ ತುದಿ ಊರುವಷ್ಟು ಸಹ ತನ್ನದೆಂಬ ಸ್ಥಳವಿಲ್ಲದೆ, (ಪಣದಂತೆ ಅರಣ್ಯವನ್ನು ಸೇರಿ ೧೨ ವರ್ಷಗಳನ್ನು ಕಳೆದು, ನಿಯತವಾದ ಒಂದು ವರ್ಷದ ಅಜ್ಞಾತವಾಸವನ್ನು ನೂಕಲು, ಬೇರೆ) ವ್ಯಾಜದಿಂದ = ಕಾರಣಾಂತರಗಳನ್ನು ತೋರಿ, ರೂಪ ಮಾಜಿಕೊಂಡು = ತಮ್ಮ ಸ್ವರೂಪವನ್ನು ಮರೆಮಾಡಿಕೊಂಡು(ವೇಷಾಂತರವನ್ನು ಧರಿಸಿ), ಪೋಗೆ (ವಿರಾಟನ ರಾಜಧಾನಿಗೆ) ಹೋಗಿರಲಾಗಿ, ರಾಜಮತ್ಸ್ಯನೊಳು = (ಮತ್ಸ್ಯದೇಶಾಧಿಪತಿ) ವಿರಾಟನಲ್ಲಿ, ಭೋಜನ ಮಾಡುತ = (ರಾಜನೊಂದಿಗೆ ರಾಜಭೋಗವನ್ನು) ಭೋಗಿಸುತ್ತ, ಪೂಜಿಸಿಕೊಂಬುದು = (ಯತಿವೇಷದಿಂದಿದ್ದ ತಾನು) ಗೌರವಿಸಲ್ಪಡುತ್ತ ವಾಸಿಸುತ್ತಿದ್ದುದು, ಸೋಜಿಗವು = ಆಶ್ಚರ್ಯವು. (ಆ ಕೃಷ್ಣನ ಕೃಪೆಯೇ ಸರಿ).[೨]

---

೧. ಎಲ್ಲ ಭಗವದವತಾರಗಳು ಶೇಷಶಾಯಿಯಾದ ಶ್ರೀಅನಂತಪದ್ಮನಾಭರೂಪದಿಂದ ವ್ಯಕ್ತವಾಗುತ್ತದೆ. ಶ್ರೀಕೃಷ್ಣನು ಅನಂತಪದ್ಮನಾಭನೆ. *'ಏತೇಸ್ವಾಂಶಕಲಾಃ ಪುಂಸಃ ಕೃಷ್ಣಸ್ತು ಭಗವಾನ್ ಸ್ವಯಂ'* - (ಭಾಗವತ); ಬಲಿಚಕ್ರವರ್ತಿಯು ಅಸುರಾವೇಶದಿಂದ, ಶ್ವೇತದ್ವೀಪದಲ್ಲಿ ಪವಡಿಸಿ ನಿದ್ರೆಯನ್ನು ವಿಡಂಬನಮಾಡುತ್ತಿದ್ದ ಶೇಷಶಾಯಿಯ ಕಿರೀಟವನ್ನು ಕದ್ದೋಡಲು ಗರುಡನು ಬೆನ್ನಟ್ಟಿ ಬಲಿಯಿಂದ ಕಿತ್ತು ತರುತ್ತಿರಲು, ಮಾರ್ಗಮಧ್ಯದಲ್ಲಿ ಗೋಮಂತಪರ್ವತದ ಮೇಲೆ ವಿಹರಿಸುತ್ತಿದ್ದ ಶ್ರೀಕೃಷ್ಣನ ತಲೆಯ ಮೇಲಿಟ್ಟು ಸಮರ್ಪಿಸಿದನು. ಅದು ಶ್ರೀಕೃಷ್ಣನ ತಲೆಗೆ ಸರಿಯಾಗಿ ಹೊಂದಿಕೊಂಡಿತೆಂಬ ಭಾಗವತೋಕ್ತ ಚರಿತ್ರೆಯು, ಶ್ರೀಕೃಷ್ಣನೇ ಶೇಷಶಾಯಿ, ಎಂಬುದನ್ನು ಸಮರ್ಥಿಸುತ್ತದೆ.

೨. ಪಂಚಪಾಂಡವರೂ ದ್ರೌಪದಿಯೂ ಒಬ್ಬರಾದ ಮೇಲೊಬ್ಬರಂತೆ ಎಲ್ಲರೂ ವಿರಾಟನಲ್ಲಿ ಬಂದು

ಮಾನಿನಿ ದ್ರೌಪದಿ ಶ್ರೇಣೆಲಿ ಬರುತಿರೆ
ತ್ರಾಣೆ ವಿರಾಟನ ರಾಣೆಯು ಕಾಣುತ
ಧ್ಯಾನಿಸಿ ಯಾರೆಂದು ಮನ್ನಿಸಿ ಕೇಳಲು
ಮುನ್ನಿನ ಸಂಗತಿ ಪೇಳಿದಳು

ಆಣೆಮುತ್ತಿನಂಥ ವಾಣೆಯ ಕೇಳಲು
ಕ್ಷೋಣೆಲಿ ನಿನ್ನಂಥ ಜಾಣೆಯ ಕಾಣೆನು
ಪ್ರಾಣೆ ನೀ ಎನಗೆ ವೇಣೆ ಹಾಕೆನ್ನುತ
ಪಾಣೆ ಹಿಡಿದು ಕರೆತಂದಳಾಗ ॥ ೨ ॥

**ಅರ್ಥ:—** ಮಾನಿನಿದ್ರೌಪದಿ = ಪೂಜ್ಯಳಾದ (ಭಾರತೀದೇವಿಯ ಅವತಾರ-ಳಾದ) ದ್ರೌಪದೀದೇವಿಯು, ಶ್ರೇಣೆಲಿ = (ನಗರದ) ಅಂಗಡಿಬೀದಿಯಲ್ಲಿ, ಬರುತಿರೆ = ಬರುತ್ತಿರಲು, ತ್ರಾಣೆ = ಸಮರ್ಥಳಾದ (ಅಧಿಕಾರಿಣೆಯಾದ), ವಿರಾಟನ ರಾಣೆಯು = ವಿರಾಟನ ಪತ್ನಿಯಾದ ರಾಣೆ ಸುದೇಷ್ಣೆಯು, ಕಾಣುತ = (ದ್ರೌಪದಿಯನ್ನು) ಕಂಡು, ಯಾರೆಂದು ಧ್ಯಾನಿಸಿ = (ಆಕೆಯ ರೂಪಾದಿಗಳಿಂದ ಚಕಿತಳಾಗಿ) ಯಾರಾಗಿರಬಹು-ದೆಂದು ಯೋಚಿಸಿ, ಮನ್ನಿಸಿ = ಕರೆದು ಗೌರವಿಸಿ, ಯಾರೆಂದು ಕೇಳಲು = ಯಾರೆಂದು ವಿಚಾರಿಸಲು, ಮುನ್ನಿನ ಸಂಗತಿ = ಮೊದಲಿನ (ಹಿಂದಿನ ವೃತ್ತಾಂತವನ್ನು = ತಾನು ಅಲ್ಲಿಗೆ ಬರಬೇಕಾದ) ಕಾರಣಗಳನ್ನು, ಪೇಳಿದಳು = ಹೇಳಿದಳು.

ಆಣೆಮುತ್ತಿನಂಥ = ಶ್ರೇಷ್ಠ ಮುತ್ತಿನಂಥ (ಅಮೂಲ್ಯವಾದ), ವಾಣೆಯ ಕೇಳಲು = ನುಡಿಯನ್ನು ಕೇಳಿದರೆ, ಕ್ಷೋಣೆಲಿ = ಭೂಮಿಯಲ್ಲಿ, ನಿನ್ನಂಥ = ನಿನಗೆ ಸಮರಾದ, ಜಾಣೆಯ ಕಾಣೆನು = ಬುದ್ಧಿಶಾಲಿನಿಯನ್ನು ಕಾಣಲಾರೆನು,[೧] ಪ್ರಾಣೆ = ಅನಾಥಳಾದ ಹೇ

---

ಸೇರಿಕೊಂಡರು ; ಪಾಂಡವರು ಅರಣ್ಯವನ್ನು ಸೇರಿದ್ದರಿಂದ ಅವರಲ್ಲಿದ್ದ ತಾವು ಜೀವನಾರ್ಥವಾಗಿ ಬಂದಿರುವುದಾಗಿಯೂ ಹೇಳಿಕೊಂಡರು. ಎಲ್ಲರೂ ದೇವಯೋಗ್ಯತೇಜಸ್ಸಿನಿಂದ ಶೋಭಿಸುತ್ತಿದ್ದರು. ಹೀಗಿದ್ದರೂ ಇವರೇ ಪಾಂಡವರೇನೋ, ಎಂಬ ಸಂಶಯ ಯಾರಿಗೂ ಹುಟ್ಟಲಿಲ್ಲ, ಆಶ್ಚರ್ಯವಲ್ಲವೇ ! ಹೀಗಾದುದು (ಯಾರಿಗೂ ತಿಳಿಯದಂತೆ ಅಜ್ಞಾತವಾಸಕ್ಕಾಗಿ ನಿಯತವಾದ ಯೋಗ್ಯಸ್ಥಾನದಲ್ಲಿ ಸೇರಿಕೊಂಡದ್ದು) ಶ್ರೀಕೃಷ್ಣನ ಕೃಪೆ – ಶ್ರೀ ದುರ್ಗೆಯು, ವಿರಾಟನಗರ ಪ್ರವೇಶಪೂರ್ವದಲ್ಲಿ ಇವರನ್ನು ಯಾರೂ ಗುರ್ತಿಸದಿರಲೆಂದು ಅನುಗ್ರಹಿಸಿದ ವರ ಪ್ರಭಾವವು.

೧. ಮುತ್ತಿನಂತೆ ಅನರ್ಘ್ಯವೂ, ಪರಿಶುದ್ಧವೂ ಆದ ನುಡಿ, ಎಂಬುದು, ಸೈರಂಧ್ರಿಯು ವಾಗಭಿ-ಮಾನಿನಿಯಾದ ಭಾರತೀದೇವಿಯ ಅವತಾರಳೆಂಬುದನ್ನು ಸೂಚಿಸುತ್ತದೆ.

ಸ್ತ್ರೀ !, ಎನಗೆ = ನನಗೆ, ವೇಣಿ ಹಾಕೆನ್ನುತ = ಹೆರಳು ಹಾಕಿಕೊಂಡಿರು (ನನಗೆ ಕೇಶಾಲಂಕಾರಾದಿಗಳನ್ನು ಮಾಡುವ ಸೇವಕಿಯಾಗಿರು) ಎಂದು, ಪಾಣಿ ಹಿಡಿದು = ಕೈ ಹಿಡಿದು (ಆಶ್ರಯವನ್ನಿತ್ತು), ಕರೆತಂದಳಾಗ = (ತನ್ನ) ಅರಮನೆಗೆ ಕರೆದುಕೊಂಡು ಹೋದಳು.

**ಈಶ ಕೇಳೊ ಪರದೇಶದಿಂದೊಬ್ಬಳು**
**ಕೇಶ ಕಟ್ಟುವಂಥ ವೇಷದಿ ಬಂದಳು**
**ಸಾಸಿರಮುಖದ ಶೇಷನೀ ರೂಪವ**
**ಲೇಸಾಗಿ ತಾ ವರ್ಣಿಸಲಾರ**
**ವಾಸಮಾಡುವೆನು ಮಾಸ ಈರಾರೆಂದು**
**ಗ್ರಾಸವ ಕೊಟ್ಟೆನ್ನ ಪೋಷಿಸೆಂದು ನುಡಿ-**
**ದೋಸನು ಪೇಳಲು ಮೀಸೆಯ ತಿರುಹುತ್ತ**
**ಮೀಸಲೆನಗೆಂದು ತೋಷಿಸಿದ** **॥ ೩ ॥**

ದಿಗ್ವಿಜಯದಿಂದ ಹಿಂದಿರುಗಿದ ಕೀಚಕನು ದ್ರೌಪದಿಯನ್ನು ಕಂಡು, ಇವಳಾರೆಂದು ತನ್ನ ಅಕ್ಕನಾದ ರಾಣಿ ಸುದೇಷ್ಣೆಯನ್ನು ಕೇಳಲು, ಆಕೆಯು ಎಲ್ಲವನ್ನೂ ಹೇಳುತ್ತಾಳೆ ; ಆಗ ದಾಸೀರೂಪದಿಂದಿದ್ದ ಆಕೆಯು ತನ್ನ ಭೋಗಕ್ಕೆ ಮೀಸಲೆಂದು ಹರ್ಷಿಸುತ್ತಾನೆ.

**ಅರ್ಥ:—** ಈಶ[1] = ಹೇ ಸಮರ್ಥಕೀಚಕ !, ಕೇಳೊ = (ಈ ಸೈರಂಧ್ರಿಯು ಇಲ್ಲಿ ಹೇಗೆ ಬಂದಳೆಂಬುದನ್ನು ಹೇಳುತ್ತೇನೆ), ಕೇಳು ; ಒಬ್ಬಳು = ಒಬ್ಬ ಸ್ತ್ರೀಯು, ಪರದೇಶದಿಂದ = ಅನ್ಯದೇಶದಿಂದ, ಕೇಶ ಕಟ್ಟುವಂಥ ವೇಷದಿ = ಸೈರಂಧ್ರೀ (ಪರರ ಮನೆಯಲ್ಲಿದ್ದು ಗಂಧಲೇಪನ, ಕೇಶಾಲಂಕಾರಾದಿ ಕೆಲಸ ಮಾಡುವಂಥ ದಾಸಿಯ) ವೇಷದಲ್ಲಿ, ಬಂದಳು ; ಸಾಸಿರಮುಖದ = ಸಾವಿರ ಮುಖವುಳ್ಳ, ಶೇಷನು = ಶೇಷದೇವನು, ಈ ರೂಪವ = ಈಕೆಯ ಸುಂದರ ರೂಪವನ್ನು (ಸೌಂದರ್ಯವನ್ನು), ತಾ = ತಾನು, ಲೇಸಾಗಿ = ಪೂರ್ಣವಾಗಿ, ವರ್ಣಿಸಲಾರ = ವರ್ಣನೆ ಮಾಡಲಾರನು.[2]

---

೧. ಭೀಮ - ಬಲಭದ್ರ - ಶಲ್ಯ - ಕೀಚಕರು ಶ್ರೇಷ್ಠ ಪರಾಕ್ರಮಿಗಳು. ಮತ್ತು ಇದೇ ಕ್ರಮದಲ್ಲಿ ಒಬ್ಬರಿಂದೊಬ್ಬರು ಕನಿಷ್ಠರು - ಕೀಚಕನು ಎಲ್ಲರಿಗಿಂತ ಕನಿಷ್ಠನು. ಕೀಚಕನ ಪರಾಕ್ರಮವನ್ನಾಶ್ರಯಿಸಿ, ವಿರಾಟನು ಸಿಂಹಾಸನದಲ್ಲಿ ಸ್ಥಿರನಾಗಿದ್ದನು. ಇದನ್ನು ಬಲ್ಲ ಸುದೇಷ್ಣೆಯು 'ಈಶ !' ಎಂದು ಸಂಬೋಧಿಸುತ್ತಾಳೆ.

೨. 'ರುದ್ರಾದಿ ಸರ್ವದೇವಾನಾಂ ಮನೋವಾಚಾಮಗೋಚರಾ ।
ಅನಾದಿತಶ್ಚ ಸರ್ವಜ್ಞಾ ದ್ವಾತ್ರಿಂಶಲ್ಲಕ್ಷಣೈರ್ಯುತಾ ॥' (ಸ.ರ.ಮಾ)

ಮಾಸ ಈರಾರು = ಒಂದು ವರ್ಷಕಾಲ, ವಾಸ ಮಾಡುವೆನು ಎಂದು = (ನಿಮ್ಮಲ್ಲಿ) ವಾಸವಾಗಿರುತ್ತೇನೆಂದೂ, ಗ್ರಾಸಕೊಟ್ಟು = ಅನ್ನವಿತ್ತು, ಎನ್ನ = ನನ್ನನ್ನು, ಪೋಷಿಸು ಎಂದು = ರಕ್ಷಿಸು ಎಂಬುದಾಗಿಯೂ, ನುಡಿದ = (ಆಕೆಯು) ಹೇಳಿದ, ಓಸನು = ಎಲ್ಲವನ್ನೂ, ಪೇಳಲು = ಹೇಳಲು, ಮೀಸೆಯ ತಿರುಹುತ್ತ = ಮೀಸೆಯನ್ನು ಹುರಿಮಾಡುತ್ತ, ಮೀಸಲು ಎನಗೆಂದು = (ಈ ಸೈರಂಧ್ರಿಯು) ನನ್ನ ಭೋಗಕ್ಕೆ ಮೀಸಲು (ಕಾದಿಡಲ್ಪಟ್ಟವಳು) ಎಂದು, ತೋಷಿಸಿದ = ಸಂತೋಷಪಟ್ಟನು.

**ನಾರಿ ಅಕ್ಕನಲ್ಲಿ ಸೇರಿಕೊಂಡಿಹಳು**
**ಮೋರೆಯ ನೋಡಲು ಭಾರಿಗುಣದಂತೆ**
**ತೋರುತಲಿದೆ ಎನ್ನ ಸೇರಿದ ಮೇಲನು-**
**ಚಾರಿ ಎನಿಸುವೆ ಮೀರಿದ್ದಕ್ಕೆ**

**ವಾರೆಗಣ್ಣೊಂದು ಸಾರಿ ನೋಡಲೆಂದು**
**ಬಾರಿಬಾರಿಯಾಕೆ ಮೋರೆ ನೋಡುತ್ತಿರೆ**
**ನೀರೆ ಆ ಕ್ರೂರನ ಘೋರರೂಪಕ್ಕಂಜಿ**
**ಮೋರೆ ತೋರದೆ ಗಂಭೀರದಿರೆ** **॥ ೪ ॥**

**ಅರ್ಥ:—** ನಾರಿ = ಈ ಸ್ತ್ರೀಯು (ಸೈರಂಧ್ರಿಯು), ಅಕ್ಕನಲ್ಲಿ = ನನ್ನ ಅಕ್ಕನಲ್ಲಿ (ಸುದೇಷ್ಣೆಯಲ್ಲಿ), ಸೇರಿಕೊಂಡಿಹಳು = ಆಶ್ರಯವನ್ನು ಪಡೆದಿದ್ದಾಳೆ ; ಮೋರೆಯ ನೋಡಲು = ಮುಖವನ್ನು ನೋಡಿದರೆ (ಈಕೆಯ ಮುಖ ಗಮನಿಸಿದರೆ), ಭಾರಿಗುಣ-ದಂತೆ = ಬಹುಗುಣಾಢ್ಯಳೆಂಬಂತೆ, ತೋರುತಲಿದೆ = ಕಾಣುತ್ತದೆ ; ಎನ್ನ ಸೇರಿದ ಮೇಲೆ = ನನ್ನನ್ನು ಕೂಡಿದ ಮೇಲೆ, ಮೀರಿದ್ದಕ್ಕೆ = ಹೆಚ್ಚಿನ (ಅಧಿಕ) ಸೇವೆಗೆ, ಅನುಚಾರಿ ಎನಿಸುವೆ = ಯೋಗ್ಯಳನ್ನಾಗಿ ಮಾಡುತ್ತೇನೆ (ನನ್ನ ಪ್ರಿಯತಮಳಿಗೆ ಯೋಗ್ಯವಾದ ಅಂತರಂಗಸೇವೆಯಲ್ಲಿ ತೊಡಗಿಸುತ್ತೇನೆ); (ಎಂದು ಕೀಚಕನು ಚಿಂತಿಸಿದನು).

---

ಭಾರತೀದೇವಿಯು ರುದ್ರಾದಿ ದೇವತೆಗಳಿಗೆ ಸಹ ನಿಲುಕದ ಗುಣಪೂರ್ಣಳು ; ಶೇಷ, ಗರುಡ, ರುದ್ರಾದಿದೇವತೆಗಳು ಸಹ ಪೂರ್ಣವಾಗಿ ವರ್ಣಿಸಲಾಗದ, ಹಾಗೂ ಚಿಂತಿಸಲಾಗದ, ಅನಂತ ಗುಣಗಳುಳ್ಳವಳು. ವಿಷ್ಣು ಬ್ರಹ್ಮ ವಾಯುಗಳು ಮತ್ತು ಅವರ ಪತ್ನಿಯರನ್ನು 'ವಿಷ್ಣುರ್ಬ್ರಹ್ಮಾ ತಥಾ ವಾಯುರನಿರುಕ್ತಾಃ । ತತ್ಪತ್ನ್ಯಶ್ಚ ...... (ಭಾಗ - ತಾ.) ದಲ್ಲಿ ಹೇಳಿದೆ. ಹೀಗೆ ಮಹಾಮಹಿಮಳಾದ ಸೈರಂಧ್ರಿಯನ್ನು ಕಂಡ ಸುದೇಷ್ಣೆಯು, ಆಕೆಯನ್ನು ದೇವಾದಿಗಳಿಂದ ಸೇವಿಸಲ್ಪಡಲು ಅರ್ಹಳಾದ ಪೂಜ್ಯ ಸ್ತ್ರೀ ಎಂದು ಊಹಿಸಿದ್ದಳೆಂಬುದು, 'ಕೇಶ ಕಟ್ಟುವಂಥ ವೇಷದಿ' ಎಂಬ ಮಾತು ಸೂಚಿಸುತ್ತದೆ.

ವಾರೆಗಣ್ಣಲ್ಲಿ = ಓರೆಗಣ್ಣಿನಿಂದ, ಒಂದು ಸಾರಿ ನೋಡಲೆಂದು = ಒಂದು ಸಲವಾದರೂ (ತನ್ನನ್ನು) ನೋಡಲೆಂದು, ಬಾರಿಬಾರಿಯೆ = ಮತ್ತೆ ಮತ್ತೆ, ಆಕೆ ಮೋರೆ ನೋಡುತ್ತಿರೆ = ದ್ರೌಪದಿಯ ಮುಖವನ್ನು (ಕೀಚಕನು) ದೃಷ್ಟಿಸಿ ನೋಡುತ್ತಿದ್ದರೂ, ನೀರೆ = ಆ ಸ್ತ್ರೀಯು, ಆ ಕ್ರೂರನ = ಆ ದುಷ್ಟ ಸ್ವಭಾವದ ಕೀಚಕನ, ಘೋರ ರೂಪಕ್ಕಂಜಿ = ಭಯಂಕರರೂಪಕ್ಕೆ ಹೆದರಿ, ಮೋರೆ ತೋರದೆ = ತನ್ನ ಮುಖವನ್ನು (ಆತನಿಗೆ) ತೋರಿಸದೆ, ಗಂಭೀರದಿ ಇರೆ = ಗಂಭೀರವಾಗಿರುತ್ತಿರಲು, (ಮುಂದಿನಂತೆ ನುಡಿದನು).

**ಅಕ್ಕನಿಗೆ ಬಾಚಿ ಹಿಕ್ಕುವ ಸೇವೆಗೆ**
**ಪುಕ್ಕಟ್ಟೆ ಅನ್ನಕ್ಕೆ ಸಿಕ್ಕುವರೇ ನೀನು**
**ಚಿಕ್ಕ ಪ್ರಾಯಕ್ಕೆನ್ನ ಪಕ್ಕಕ್ಕೆ ಬಂದರೆ**
**ಸಕ್ಕರೆದುಟಿ ಸವಿ ದಕ್ಕಿಸುವೆ**

**ರಕ್ಕಸ ನಿನಗೆ ದಕ್ಕುವಳೇ ನಾನು**
**ಮುಕ್ಕಣ್ಣನಾದರೂ ಲೆಕ್ಕಿಸದ ಪತಿ**
**ಘಕ್ಕನೆ ಬಂದರೆ ತಿಕ್ಕಿ ನಿನ್ನ ಕಾಯ**
**ದಿಕ್ಕು ದಿಕ್ಕಿಗೆ ಬಲಿ ಇಕ್ಕುವರೋ** ॥ ೫ ॥

**ಅರ್ಥ:—** ಅಕ್ಕನಿಗೆ(ನನ್ನ) ಅಕ್ಕನಿಗೆ, ಬಾಚಿ ಹಿಕ್ಕುವ ಸೇವೆಗೆ = ಕೇಶಾಲಂಕಾರಾದಿ ಸೇವೆಗಾಗಿ, ಪುಕ್ಕಟ್ಟೆ ಅನ್ನಕ್ಕೆ = ಅನ್ಯಸೇವೆ ಅಥವಾ ಬೇರೆ ಬೆಲೆಯಿಲ್ಲದೆ ಹಾಕುವ ಅನ್ನಕ್ಕೆ, ನೀನು = ನಿನ್ನಂಥ ಸುಂದರ ತರುಣಿಯು, ಸಿಕ್ಕುವರೇ = ಸೇರಿಕೊಳ್ಳಬಹುದೇ ? ಚಿಕ್ಕ ಪ್ರಾಯಕ್ಕೆ = ನಿನ್ನ ತಾರುಣ್ಯಕ್ಕೆ ತಕ್ಕಂತೆ, ಎನ್ನ ಪಕ್ಕಕ್ಕೆ ಬಂದರೆ = ನನ್ನ ಮಗ್ಗಲಿಗೆ ಬಂದರೆ, (ನನ್ನವಳಾದರೆ), ಸಕ್ಕರೆದುಟಿ ಸವಿ = ಸಿಹಿತುಟಿಯ ರುಚಿಯನ್ನು (ಅಧರಾಮೃತದ ಸವಿಯನ್ನು), ದಕ್ಕಿಸುವೆ = ನಿನಗೆ ದೊರಕಿಸುತ್ತೇನೆ ;

(ಕೀಚಕನು ಈ ಹೀನನುಡಿಯನ್ನಾಡಲು), ದ್ರೌಪದಿಯು, ರಕ್ಕಸ = ಹೇ ರಾಕ್ಷಸ ! ನಾನು = ನನ್ನಂಥವಳು, ನಿನಗೆ ದಕ್ಕುವಳೇ = ನಿನಗೆ ದೊರೆಯುವೆನೇ ? (ನಿನ್ನ ವಶ-ಳಾಗುವೆನೇ?); ಮುಕ್ಕಣ್ಣನಾದರೂ = ತ್ರಿನೇತ್ರನಾದ ಶಿವನೇ ಆದರೂ, ಲೆಕ್ಕಿಸದ = ಗಣನೆಗೆ ತಾರದ (ಹೆದರದ), ಪತಿ = ನನ್ನ ಪತಿಯು, ಘಕ್ಕನೆ ಬಂದರೆ = ಅಕಸ್ಮಾತ್ ಬಂದರೆ (ನಿನ್ನ ದುಷ್ಟಚರ್ಯೆಯನ್ನು ತಿಳಿದರೆ) ನಿನ್ನ ಕಾಯ = ನಿನ್ನ ದೇಹವನ್ನು ತಿಕ್ಕಿ = ವರೆಸಿ (ಮರ್ದಿಸಿ), ದಿಕ್ಕು ದಿಕ್ಕಿಗೆ = ಎಲ್ಲ ದಿಕ್ಕುಗಳಿಗೆ, ಬಲಿ ಇಕ್ಕುವರೋ = ಬಲಿ-ಕೊಡುವರು (ದುಷ್ಟ ಮಾಂಸಾಹಾರಿಗಳನ್ನು ನಿನ್ನ ದೇಹದ ಮಾಂಸದಿಂದ ದಣಿಸುವರು).

**ಭಂಡಕೀಚಕ ಎನ್ನುದ್ದಂಡತನ ಕೇಳು**
**ಮಂಡೆ ಹಿಕ್ಕುವಳೆಂದು ಕಂಡ ಕಂಡ ಬಳಿ**
**ಪುಂಡುಮಾಡುವರೆ ಗಂಡರ್ಕಂಡರೆ ತಲೆ**
**ಚಂಡನಾಡುವರೊ ಖಂಡಿತದಿ**

**ಮಂಡಲಾಧಿಪನ ಹೆಂಡತಿ ನೀನಮ್ಮ**
**ಉಂಡಮನೆಗೆ ಹಗೆಗೊಂಡಳೆನ್ನದಿರು**
**ಲಂಡನಿಗೆ ಬುದ್ಧಿ ದಂಡಿಸಿ ಪೇಳದೆ**
**ಹಿಂಡಿಕೊಳ್ಳದಿರು ದುಂಡುಮುಖ** ॥ ೬ ॥

**ಅರ್ಥ:—** ಭಂಡ ಕೀಚಕ = ಹೇ ನಿರ್ಲಜ್ಜ ಕೀಚಕ !, ಎನ್ನ = ನನ್ನ, ಉದ್ದಂಡತನ = ಸಾಮರ್ಥ್ಯವನ್ನು (ಶಾಸಕಶಕ್ತಿಯ ಶ್ರೇಷ್ಠತ್ವವನ್ನು), ಕೇಳು = ತಿಳಿ (ತಿಳಿದು ಎಚ್ಚರ ಪಡಿ); ಮಂಡೆ ಹಿಕ್ಕುವಳೆಂದು = ತಲೆಬಾಚುವ (ಹೆರಳು ಹಾಕುವ) ಅಲ್ಪಸೇವಕಿಯೆಂದು, ಕಂಡ ಕಂಡ ಬಳಿ = ಕಂಡಲ್ಲೆಲ್ಲ, ಪುಂಡುಮಾಡುವರೆ = ಮಾನ ಕಳೆಯಬಹುದೇ, (ದುರ್ಮಾರ್ಗದಿಂದ ವರ್ತಿಸಬಹುದೆ ?), ಗಂಡರ್ಕಂಡರೆ = (ಹಾಗೆ ಮಾಡುವುದನ್ನು) ನನ್ನ ಪತಿಗಳು ನೋಡಿದರೆ, ಖಂಡಿತದಿ = ನಿಶ್ಚಯವಾಗಿ, ತಲೆ = ನಿನ್ನ ರುಂಡವನ್ನು, ಚಂಡನಾಡುವರೊ = (ಕತ್ತರಿಸಿ) ಚಂಡಿನಂತೆ ತೂರುವರಯ್ಯ.

(ಹೀಗೆ ಕೀಚಕನಿಗೆ ಬುದ್ಧಿ ಹೇಳಿ, ದ್ರೌಪದಿಯು ರಾಣಿ ಸುದೇಷ್ಣೆಗೆ ಹೇಳುತ್ತಾಳೆ). ಅಮ್ಮ = ಹೇ ತಾಯಿ !, ನೀನು = ನೀನಾದರೋ, ಮಂಡಲಾಧಿಪನ ಹೆಂಡತಿ = ರಾಜ-ಭಾರ್ಯಳು (ರಾಣಿಯು)[೧]; ಉಂಡ ಮನೆಗೆ = (ಇಷ್ಟುಕಾಲ) ಅನ್ನಕ್ಕಾಗಿ ಆಶ್ರಯಿಸಿದ ಮನೆಗೆ, ಹಗೆಗೊಂಡಳು = ಶತ್ರುವಾದಳು (ದ್ವೇಷಿಯಾದಳು) ಎನ್ನದಿರು = ಎನ್ನಬೇಡ ; (ನಿನ್ನ ತಮ್ಮ ಕೀಚಕನ ಮೇಲೆ ನಾನು ನಿನ್ನಲ್ಲಿ ಹೇಳಿದ ದೂರಿನಿಂದ ನನ್ನ ವಿಷಯಕ್ಕೆ ಹೀಗೆ ತಿಳಿಯದಿರು); ಲಂಡನಿಗೆ = ದುರ್ಮಾರ್ಗಿಯಾದ (ನಿರ್ಲಜ್ಜ = ಭಂಡನಾದ) ನಿನ್ನ ತಮ್ಮನಿಗೆ, ದಂಡಿಸಿ = ಶಿಕ್ಷಿಸಿ (ಸನ್ಮಾರ್ಗವನ್ನು ಉಪದೇಶಿಸಿ), ಬುದ್ಧಿ ಪೇಳದೆ = ಬುದ್ಧಿಯನ್ನು ಹೇಳದೆ (ಪರಸ್ತ್ರೀಯರ ವಿಷಯದಲ್ಲಿ ನಡೆದುಕೊಳ್ಳಬೇಕಾದ ಯೋಗ್ಯಮಾರ್ಗವನ್ನು ಹೇಳದೆ), ದುಂಡುಮುಖ = ನಿನ್ನ ಚೆಲುವ ಮುಖವನ್ನು, ಹಿಂಡಿ ಕೊಳ್ಳದಿರು = ಹಿಂಡಿ-ಕೊಳ್ಳಬೇಡ (ಚಾಡಿಹೇಳಿದಳೆಂದು ಚಿಕ್ಕದು ಮಾಡಿಕೊಳ್ಳಬೇಡ).

---

೧. ಅಧಿಕಾರದಿಂದ ಬುದ್ಧಿ ಹೇಳು – ಕೇಳದಿದ್ದರೆ ಯೋಗ್ಯ ಶಿಕ್ಷೆಗೆ ಗುರಿಯಾಗುವಿ ; ಎಂದು ತಿಳಿಸು. ರಾಜನ ಸ್ಥಾನವೇ ಕೀಚಕನ ಪರಾಕ್ರಮವನ್ನಾಶ್ರಯಿಸಿರುವಾಗ, ಈ ಧೈರ್ಯ ನನಗೆಲ್ಲಿ? ಎನ್ನಬೇಡ. ದುಷ್ಟನ ಆಶ್ರಯವನ್ನು ಬಿಡು ; ನಿನ್ನ ಸ್ಥಾನಮಾನಗಳ ರಕ್ಷಕರು ಬೇರೆ (ಶ್ರೀಹರಿವಾಯುಗಳು) ಎಂದು ತಿಳಿ.

**ತರಳ ನಿನ್ನಯ ದುರಳತನದ**
**ಬೆರಳ ಸನ್ನೆಯೆ ಗರಳವಾಯಿತು**
**ಸರಳ ಸೂರೆಗೆ ಕೊರಳ ಕೊಡದಲೀ-**
**ಪುರದೊಳಿರದೆ ತೆರಳಿನ್ನು**
**ಅರಳಮೊಗ್ಗೆಯ ಹೆರಳಿಗ್ಹಾಕುತ**
**ಕುರುಳು ತಿದ್ದುವ ತರಳೆಯ ಕಂಡು**
**ಇರುಳು ಹಗಲು ಬಾರಳು ಎನ್ನುತ**
**ಮರುಳುಗೊಂಡರೆ ಬರುವಳೇ** ॥ ೭ ॥

ಸೈರಂಧ್ರಿಯ ಮತುಗಳನ್ನು ಕೇಳಿ ಸುದೇಷ್ಣೆಯು ಕೀಚಕನಿಗೆ ಹೇಳುತ್ತಾಳೆ :—

**ಅರ್ಥ:—** ತರಳ = ಹೇ ಅನುಜ !, ನಿನ್ನಯ ದುರಳತನದ = ನಿನ್ನ ಕೆಟ್ಟ ನಡತೆಯಿಂದಾದ, ಬೆರಳಸನ್ನೆಯೇ = (ಸೈರಂಧ್ರಿಯನ್ನು ಕಂಡು ನೀನು ಮಾಡಿದ) ಕೈಸನ್ನೆಯೇ, ಗರಳವಾಯಿತು = ವಿಷವಾಯಿತು (ಪ್ರಾಣಾಪಾಯಕ್ಕೆ ಕಾರಣವಾಯಿತು) , ಸರಳ ಸೂರೆಗೆ = ಖಡ್ಗದ ವಿಲಾಸಕ್ಕೆ, ಕೊರಳ ಕೊಡದಲೆ = (ನಿನ್ನ) ಶಿರವನ್ನು ನೀಡದಂತೆ, ಈ ಪುರದೊಳಿರದೆ = ಈ ಪಟ್ಟಣವನ್ನು ಬಿಟ್ಟು, ಇನ್ನು ತೆರಳು = ಈಗ ಹೋಗು (ಸೈರಂಧ್ರಿಯ ವಾಸದ ಅವಧಿಯು ಮುಗಿಯುವವರೆಗೆ ಹೋಗು).

ಅರಳುಮೊಗ್ಗೆಯ = '**ಅರಳಮೊಗ್ಗು**' ಎಂಬ ಆಭರಣವನ್ನು ಅಥವಾ ಅರಳಿದ ಮೊಗ್ಗನ್ನು, ಹೆರಳಿಗೆ ಹಾಕುತ = ಹೆರಳಿಗೆ ಜೋಡಿಸಿ, ಕುರುಳು ತಿದ್ದುವ = ಮುಂಗುರಳನ್ನು ಸರಿಪಡಿಸಿ ಮುಖವನ್ನು ಅಲಂಕರಿಸುವ, ತರಳೆಯ ಕಂಡು = ಸ್ತ್ರೀಯನ್ನು ಕಂಡು, ಇರುಳು ಹಗಲು = ರಾತ್ರಿ ಹಗಲು (ದಿನವೆಲ್ಲ), ಬಾರಳು ಎನ್ನುತ್ತ = (ನನ್ನ ಬಳಿಗೆ) ಬರಲಿಲ್ಲ ವೆಂದು, ಮರುಳುಗೊಂಡರೆ = ಚಿತ್ತವಿಕಾರವನ್ನು ಹೊಂದಿದರೆ (ಆಸೆಗೆ ಮಾರು ಹೋದರೆ), ಬರುವಳೇ = (ಆಕೆಯು) ನಿನ್ನ ಬಳಿ ಬರುವಳೇ ! (ಎಂದೂ ಬಾರಳು)[೧]

**ನಿಷ್ಠೆ ಸೈರಂಧ್ರಿಯ ದೃಷ್ಟಿಸಿ ನೋಡಲು**
**ನಷ್ಟವಾಗುವುದು ಅಷ್ಟೈಶ್ವರ್ಯವು**
**ಭ್ರಷ್ಟನಿಗೆ ನಾನೆಷ್ಟು ಪೇಳಲಿನ್ನು**
**ಕಟ್ಟಕಡೆಗೆ ನೀ ಕೆಟ್ಟೆ ಕಂಡ್ಯ**

೧. ನಿನ್ನ ಪರಾಕ್ರಮವೈಭವಾದಿಗಳಿಗೆ ಮೆಚ್ಚಿ ತಾನಾಗಿಯೇ ನಿನ್ನ ವಶಳಾಗುವ ಸಾಮಾನ್ಯ ಸೇವಕಿಯಲ್ಲ ಸೈರಂಧ್ರಿ ; ಆಕೆ ಬಹು ಘನವಂತೆ.

**ಸೃಷ್ಟಿಲಿ ನನ್ನಂಥ ಗಟ್ಟಿಗನ್ಯಾರಕ್ಕ**
**ದುಷ್ಟರೆದೆಯನು ಮೆಟ್ಟಿ ಸೀಳುವೆನು**
**ಗುಟ್ಟಿಂದ ನಾರಿಯ ಕೊಟ್ಟು ಕಳುಹಲು**
**ಪಟ್ಟದ ರಾಣಿಯೋಲಿಟ್ಟು ಕೊಂಬೆ** ॥ ೮ ॥

**ಅರ್ಥ:—** ನಿಷ್ಠೆ ಸೈರಂಧ್ರಿಯ = (ಸದಾಚಾರದಲ್ಲಿ) ದೃಢನಿಷ್ಠೆಯುಳ್ಳ ಸೈರಂಧ್ರಿಯನ್ನು, ದೃಷ್ಟಿಸಿ ನೋಡಲು = ಕಾಮಿಸಿ ನೋಡಿದರೆ (ಎವೆಯಿಕ್ಕದೆ ನೋಡಿದರೆ), ಅಷ್ಟೈಶ್ವರ್ಯವು ನಷ್ಟವಾಗುವುದು = (ಆ ಮಹಾಪಾಪದಿಂದ) ರಾಜ್ಯ, ಭಂಡಾರ, ಸೈನ್ಯ, ಆನೆ, ಕುದುರೆ, ಛತ್ರ, ಚಾಮರ, ಪಲ್ಲಕ್ಕಿ ಈ ಎಂಟು ಐಶ್ವರ್ಯಗಳೂ ನಾಶವಾಗುತ್ತವೆ ; ಭ್ರಷ್ಟನಿಗೆ = ನೀತಿಕೆಟ್ಟ ನಿನಗೆ, ನಾನೆಷ್ಟು ಪೇಳಲಿ = ನಾನು ಇನ್ನೆಷ್ಟು ಪರಿಯಿಂದ ಬುದ್ಧಿ ಹೇಳಲಿ ?, ಕಟ್ಟಕಡೆಗೆ = (ಈ ದುಷ್ಟ ಆಶೆಯನ್ನು ಪೂರ್ಣಮಾಡಿಕೊಳ್ಳಲು ಮುಂದುವರಿದರೆ) ಕೊನೆಗೆ, ನೀ = ನೀನು, ಕೆಟ್ಟೆಕಂಡ್ಯ = ಕೆಟ್ಟೀಯೆ, ನೋಡು ! (ವಿಪತ್ತಿಗೆ ಗುರಿಯಾದೀಯೆ = ಎಚ್ಚರಿಕೆ !)

ಸುದೇಷ್ಣೆಯು ಹೀಗೆ ಹೇಳಲು, ಸೈರಂಧ್ರಿಯನ್ನು ಪಡೆಯುವ ತನ್ನ ನಿರ್ಧಾರವನ್ನು ತಿಳಿಸುತ್ತ, ಹೀಗೆ ಹೇಳುತ್ತಾನೆ :—

ಅಕ್ಕ = ಹೇ ಅಕ್ಕ !, ಸೃಷ್ಟಿಲಿ = ಜಗತ್ತಿನಲ್ಲಿ, ನನ್ನಂಥ = ನನ್ನ ಸಮನಾದ, ಗಟ್ಟಿಗನಾರು = ಬಲಿಷ್ಠನು ಯಾರು ? (ಯಾರೂ ಇಲ್ಲ) ; ದುಷ್ಟರೆದೆಯನು ಮೆಟ್ಟಿ = ನನ್ನ ವಿರೋಧಿಗಳ ಎದೆಯನ್ನು ತುಳಿದು, ಸೀಳುವೆನು = ಸೀಳಿಹಾಕುತ್ತೇನೆ (ನನಗೆ ಯಾರಿಂದಲೂ ವಿಪತ್ತು ಬರಲವಕಾಶವೇ ಇಲ್ಲ — ಹೆದರದಿರು); ನಾರಿಯ = ಈ ಸ್ತ್ರೀಯನ್ನು (ಸೈರಂಧ್ರಿಯನ್ನು), ಗುಟ್ಟಿಂದ = ಗುಟ್ಟಾಗಿ (ಯಾರಿಗೂ ತಿಳಿಯದಂತೆ), ಕೊಟ್ಟುಕಳುಹಲು = ನನ್ನ ಬಳಿ ಕಳುಹಿಸಿದರೆ, ಪಟ್ಟದ ರಾಣಿಯೊಲ್ ಪಟ್ಟದ ರಾಣಿಯಂತೆ (ಅಂತಃಪುರದ ನನ್ನ ಎಲ್ಲ ಸ್ತ್ರೀಯರನ್ನು ಆಕೆಯ ದಾಸಿಯರನ್ನಾಗಿಸಿ, ಆಕೆಯನ್ನು ಮುಖ್ಯಪತ್ನಿಯನ್ನಾಗಿ), ಇಟ್ಟುಕೊಂಬೆ = ಇಟ್ಟುಕೊಳ್ಳುತ್ತೇನೆ.

**ಕೀಚಕನಾಡಿದ ನೀಚನುಡಿ ಕೇಳಿ**
**ನಾಚಿ ಪತಿಯೊಳು ಸೂಚಿಸಬೇಕೆಂದು**
**ಯೋಚಿಸಿ ಸುಮ್ಮನೆ ಈಚೆ ಬರುತಿರೆ ನಿ-**
**ಶಾಚರ ಕರವ ಚಾಚಿದನು**

**ಬಾಚಿ ಹಿಕ್ಕುವಂಥ ಪ್ರಾಚೀನವೇನಿದು**
**ವಾಚನಾಡು ಮೀನಲೋಚನೆ ಎನ್ನಲು-**
**ಆಚರಿಸಿ ಮುಂದು ತೋಚದೆ ಖಳನ**
**ವಿಚಾರಿಸಿಕೊ ಶ್ರೀಚಕ್ರಪಾಣಿ ॥ ೯ ॥**

೫ನೇ ನುಡಿಯಲ್ಲಿ ನಿರೂಪಿಸಿದ ಕೀಚಕನ ದುಷ್ಟ ಮಾತುಗಳನ್ನು ಕೇಳಿದ ಸೈರಂಧ್ರಿಯ ಮನೋಭಾವಗಳನ್ನು ಈ ನುಡಿಯಲ್ಲಿ ವರ್ಣಿಸಲಾಗಿದೆ.

**ಅರ್ಥ:—** ಕೀಚಕನಾಡಿದ = ಕೀಚಕನು ಉಚ್ಚರಿಸಿದ, ನೀಚನುಡಿ = ನೀಚ ಮಾತುಗಳನ್ನು, ಕೇಳಿ, ನಾಚಿ = (ಲಜ್ಜೆಯಿಂದ) ತಲೆ ತಗ್ಗಿಸಿ, ಪತಿಯೊಳು = ತನ್ನ ಪತಿಗೆ, ಸೂಚಿಸಬೇಕೆಂದು = (ಯೋಗ್ಯ ಶಾಸನ ಮಾಡಲು) ತಿಳಿಸಬೇಕೆಂದು, ಯೋಚಿಸಿ, ಸುಮ್ಮನೆ = (೬ನೇ ನುಡಿಯ ಪೂರ್ವಾರ್ಧದಲ್ಲಿ ನಿರೂಪಿಸಿದಂತೆ, ತನ್ನ ಪತಿಯಿಂದ ಪ್ರಾಣವನ್ನು ಕಳೆದುಕೊಳ್ಳುವಿಯೆಂದು ಹೇಳಿ) ಅವನೊಂದಿಗೆ ವಾದವನ್ನು ಬೆಳೆಸಲಪೇಕ್ಷಿ-ಸದೆ, ಈಚೆ ಬರುತಿರೆ = ಬೇರೆ ಕಡೆಗೆ (ಅವನಿಲ್ಲದ ಕಡೆಗೆ) ಬರುತ್ತಿರಲು, ನಿಶಾಚರ = ಆ ರಾಕ್ಷಸನು, (ಕೀಚಕನು), ಕರವ = (ತನ್ನ) ಕೈಯನ್ನು ಚಾಚಿದನು = ಅಡ್ಡ ಹಿಡಿದನು ;

ಆಕೆಯನ್ನು ತಡೆದು ಹೀಗೆ ಹೇಳಿದನು :—

ಬಾಚಿ ಹಿಕ್ಕುವಂಥ = ತಲೆಗೂದಲನ್ನು ಸರಿಪಡಿಸಿ ಹೆರಳುಹಾಕುವಂಥ (ಈ ಕ್ಷುದ್ರ ಸೇವೆಯಿಂದ ಜೀವಿಸುವಂಥ) ಪ್ರಾಚೀನವೇನಿದು = (ನಿನ್ನ) ಯಾವ ಪ್ರಾರಬ್ಧಕರ್ಮದ ಫಲವಿದು ? ವಾಚನಾಡು = (ಹೇ ಸೈರಂಧ್ರಿ !) ಮಾತನಾಡು, ಮೀನಲೋಚನೆ = ಹೇ ಸುಂದರಿ ! (ಮತ್ಸ್ಯದಂತೆ ನೀಳಾದ ಕಣ್ಣುಳ್ಳ ಸುಂದರಿ !) ಎನ್ನಲೂ ಮುಂದು-ತೋರದೆ = ಮುಂದೇನನ್ನೂ ಮಾಡಲು ಇಷ್ಟಪಡದೇ, (ಅಥವಾ ತೋಚದೇ), ಶ್ರೀಚಕ್ರಪಾಣಿ = ಹೇ ಚಕ್ರಹಸ್ತ ಶ್ರೀಕೃಷ್ಣ ! ಆಚರಿಸಿ ತಕ್ಕದ್ದು ಮಾಡಿ, ಖಳನ = ಈ ದುಷ್ಟನನ್ನು ವಿಚಾರಿಸಿಕೊ = ಶಿಕ್ಷೆಗೆ ಗುರಿಪಡಿಸು.

**ಪೊಡವಿಪತಿಗಳ ಮಡದಿ ನಾನಾಗಿ**
**ಬಡತನವು ಬಂದು ಒಡಲಿಗಿಲ್ಲದೆ**
**ನಾಡ ದೊರೆಗಳ ಬೇಡುವುದಾಯಿತು**
**ಮಾಡುವುದೇನೆಂದು ನುಡಿದಳು**

**ಕೇಡಿಗ ಕೀಚಕ ಮಾಡಿದ ಚೇಷ್ಟೆಗೆ**
**ಕಡಲಶಾಯಿ ಕಾಪಾಡಬೇಕೆನ್ನನು**

**ಆಡಲಂಜಿಕೇನು ಷಡುರಸಾನ್ನದ**
**ಅಡಿಗೆ ರುಚಿಯ ನೋಡುವರೆ** ॥ ೧೦ ॥

ಸೈರಂಧ್ರಿಯು ಕೀಚಕನ ಪ್ರಶ್ನೆಯನ್ನು ಉತ್ತರಿಸುತ್ತಾಳೆ :—

**ಅರ್ಥ:**— ಪೊಡವಿಪತಿಗಳ ಮಡದಿ ನಾನಾಗಿ = ನಾನು ಭೂಪತಿಗಳ (ರಾಜಾಧಿರಾಜರ) ಪತ್ನಿಯಾಗಿದ್ದು, ಬಡತನವು ಬಂದು = ಕಾರಣಾಂತರಗಳಿಂದ ರಾಜ್ಯೈಶ್ವರ್ಯಾದಿಗಳನ್ನು ಕಳೆದುಕೊಂಡು ಬಡತನವು ಬರಲು, ಒಡಲಿಗೆ ಇಲ್ಲದೆ = ಹೊಟ್ಟೆಗಿಲ್ಲದೆ, ನಾಡದೊರೆಗಳ = ಅನ್ಯ ದೇಶದ ದೊರೆಗಳ, ಬೇಡುವುದಾಯಿತು = (ಅನ್ನಕ್ಕಾಗಿ) ಯಾಚಿಸುವ ಪ್ರಸಂಗ ಉಂಟಾಯಿತು ; ಮಾಡುವುದೇನು = (ದೈವದ ಮುಂದೆ ಮನುಷ್ಯಯತ್ನವೆಷ್ಟರದು ?) ಏನು ಮಾಡುವುದು ? ಎಂದು ನುಡಿದಳು = ಎಂದು ಹೇಳಿದಳು ; (ಮತ್ತು ತನ್ನೊಳಗೆ ಹೀಗೆಂದುಕೊಂಡಳು) :-

ಕೇಡಿಗ ಕೀಚಕ = ದುಷ್ಟ ಕೀಚಕನು (ತನಗೆ ಪ್ರಾಪ್ತನಾಗುವ ವಿಪತ್ತನ್ನು ಲಕ್ಷಿಸದೆ ವರ್ತಿಸುವ ಈತನು), ಮಾಡಿದ ಚೇಷ್ಟೆಗೆ = ದುರ್ನಯದ ಕೀಟಲೆಗೆ, ಎನ್ನನು = ನನ್ನನ್ನು, ಕಡಲಶಾಯಿ = ಪದ್ಮನಾಭನಾದ (ಕ್ಷೀರಸಮುದ್ರಶಾಯಿ) ಶ್ರೀಕೃಷ್ಣನು, ಕಾಪಾಡಬೇಕು = (ಆತನನ್ನು ಶಿಕ್ಷಿಸಿ) ನನ್ನನ್ನು ರಕ್ಷಿಸಬೇಕು ; ಆಡಲು = ಇದ್ದದ್ದನ್ನು ಹೇಳಲು, (ಶಕ್ತನಾದ ಶ್ರೀ ಭೀಮಸೇನನಲ್ಲಿ ತಿಳಿಸಿ ಅವನ ಸಂಹಾರವನ್ನು ಮಾಡಿಸಲು), ಏನು ಅಂಜಿಕೆ = ಭಯವೇಕೆ ? (ರಾಣಿಯ ಬುದ್ಧಿಯ ಮಾತುಗಳೂ ವ್ಯರ್ಥವಾದುವು), ಷಡುರಸಾನ್ನದ = (ರಾಣಿಯು ನಮಗೆ ಒದಗಿಸುತ್ತಿರುವ) ಷಡ್ರಸಾನ್ನದ (ರುಚಿಕರವಾದ), ಅಡುಗೆ ರುಚಿಯ ಅಡಿಗೆಯ ರುಚಿಯನ್ನು, ನೋಡುವರೆ = ಗಮನಿಸಬಹುದೇ ? (ಅನ್ನಕ್ಕಾಗಿ ದುಷ್ಟಕೀಚಕನಿಂದಾಗುವ ಅಪಮಾನವನ್ನು ಶ್ರೀ ಭೀಮಸೇನನಲ್ಲಿ ಹೇಳದಿರುವುದು ಸರ್ವಥಾ ಯೋಗ್ಯವಲ್ಲ).

ಹೀಗೆ ನಿರ್ಧರಿಸಿದ ದ್ರೌಪದಿಯು, ಶ್ರೀಭೀಮಸೇನನ ಬಳಿ ಬಂದು ದುಷ್ಟಕೀಚಕನ ವರ್ತನೆಯನ್ನು ವಿವರಿಸಿ ಕಣ್ಣೀರಿಡುತ್ತಾಳೆ :—

**ನಡುಗುವ ಧ್ವನಿಯಲಿ ಬಿಡುತ ಕಣ್ಣೀರನು**
**ಆಡಿದ ಮಾತನು ಬಾಡಿದ ಮುಖವನು**
**ನೋಡಿದಾಕ್ಷಣ ತೊಡೆದು ನೇತ್ರವ**
**ಬಿಡು ಬಿಡು ದುಃಖವ ಮಾಡದಿರು**

ಮಿಡುಕಿ ನಿನ್ನನು ಹಿಡಿದ ಖಳನನು
ಬಡಿದು ಯಮನಿಗೆ ಕೊಡುವೆ ನೋಡೀಗ
ತಡವ ಮಾಡದೆ ಗಾಡದಿ ಪೋಗು ನೀ
ಮಾಡಿದ ಚಿಂತೆ ಕೈಗೂಡಿತೆಂದು ॥ ೧೧ ॥

**ಅರ್ಥ:—** ನಡುಗುವ ಧ್ವನಿಯಲಿ = ಕಂಪಿಸುವ ಧ್ವನಿಯಿಂದ, ಕಣ್ಣೀರನು ಬಿಡುತ = ಕಣ್ಣಿನಲ್ಲಿ ನೀರು ಸುರಿಸುತ್ತ, ಆಡಿದ ಮಾತನು = (ದ್ರೌಪದಿಯು ಕೀಚಕನ ದುರ್ವರ್ತನೆಯನ್ನು ವಿವರಿಸಿ) ಆಡಿದ ಮಾತುಗಳನ್ನೂ, ಬಾಡಿದ ಮುಖವನು = ಕಂದಿದ ಮುಖವನ್ನೂ, ನೋಡಿದಾಕ್ಷಣ = ಕಂಡೊಡನೆಯೇ, ನೇತ್ರವ ತೊಡೆದು = (ಭೀಮ-ಸೇನನು) ಕಣ್ಣನ್ನು ಒರಸಿ, ಬಿಡು ಬಿಡು, ದುಃಖವ ಮಾಡದಿರು = (ಯೋಚನೆಯನ್ನು) ಬಿಡು, ದುಃಖಿಸಬೇಡ ;

ನಿನ್ನನು ಮಿಡುಕಿ = ನಿನ್ನನ್ನು ಕೆಣಕಿ (ನೀತಿಕೆಟ್ಟ ಮಾತುಗಳಿಂದ ಮನನೋಯಿಸಿ) ಹಿಡಿದ ಖಳನನು = ಕೈಹಿಡಿದ ದುಷ್ಟನನ್ನು,[೧] ಬಡಿದು = ಹೊಡೆದು(ಮರ್ದಿಸಿ), ಯಮ-ನಿಗೆ ಕೊಡುವೆ = ಸಂಹರಿಸುತ್ತೇನೆ (ಯಮನಲ್ಲಿಗೆ ಕಳುಹಿಸುತ್ತೇನೆ). ನೋಡೀಗ = ಬೇಗನೆ ಈ ಕಾರ್ಯವನ್ನು ನೋಡುವಿ ; ತಡ ಮಾಡದೆ = ಕಾಲವಿಳಂಬ ಮಾಡದೇ, ಗಾಡದಿ ಪೋಗು = ಬೇಗ ಹೋಗು ; ನೀ ಮಾಡಿದ ಚಿಂತೆ = ನಿನ್ನ ಆಲೋಚನೆಯು (ಈ ದುರುಳನಿಗೆ ತಕ್ಕ ಶಿಕ್ಷೆಯನ್ನು ಮಾಡಿಸಬೇಕೆಂಬ ನಿನ್ನ ಯೋಚನೆಯು), ಕೈಗೂಡಿ-ತೆಂದು = ಸಾಧಿಸಿತೆಂದು (ಸಫಲವಾಯಿತೆಂದು), ನೀ ಪೋಗು = (ದೃಢವಾಗಿ ನಂಬಿ-ಕೊಂಡು, ನಾನು ಹೇಳಿದಂತೆ ಮಾಡಲು ನಿರ್ಭಯಳಾಗಿ) ನೀನು ಹೋಗು.[೨]

ಮೋಸಮಾಡಿ ಪೋದಳಾ ಶಶಿಮುಖಿಯೆಂ-
ದಾಶೆ ಬಿಡದೆ ತಾ ವ್ಯಸನಗೊಳ್ಳುತ
ಪೂಶರತಾಪಕ್ಕೆ ಕೇಸರಿಗಂಧವ
ದಾಸಿಯರಿಂದ ಪೂಸಿಕೊಂಡು

---

೧. ಸೈರಂಧ್ರಿಯನ್ನು ಕೀಚಕನು ಮುಂಗೈ ಹಿಡಿದೆಳೆದು, ಆಕೆಯು ತಪ್ಪಿಸಿಕೊಳ್ಳಲು, ಸಿಟ್ಟಾಗಿ ಆಕೆಯನ್ನು ಕೆಡವಿ ಕಾಲಿನಿಂದ ಒಡೆದ ವಿಷಯವನ್ನೂ, ಹೇತಿನಾಮಕ ಸೂರ್ಯಭೃತ್ಯನು ಆಕೆಯನ್ನು ರಕ್ಷಿಸಿದುದನ್ನೂ ಭೀಮಸೇನನು ತಿಳಿದಿದ್ದನು.

೨. ಆ ರಾತ್ರಿ ನಿರ್ಜನವಾದ ಗರಡಿಮನೆಯಲ್ಲಿ ನಿನ್ನ ಅಭಿಲಾಷೆಯನ್ನು ಪೂರೈಸುವೆನೆಂದು ಕೀಚಕನಿಗೆ ತಿಳಿಸಿ, ನೀನೂ ಆ ಸ್ಥಳಕ್ಕೆ ಹೋಗಿರು, ಎಂದು ಭೀಮಸೇನನು ದ್ರೌಪದಿಗೆ ಆಜ್ಞಾಪಿಸಿ, ನಿರ್ಭಯಳಾಗಿ ಆ ದುರುಳನ ಬಳಿ ಹೋಗೆಂದು ಹೇಳುತ್ತಾನೆ.

ಹಾಸುಮಂಚದಲ್ಲಿ ಬೀಸಿಕೊಳ್ಳುತಲಿ
ಘಾಸಿಪಡುತ್ತಿರೆ ಆ ಸಮಯದಲ್ಲಿ
ಲೇಸಾಗಿ ನಿನ್ನಭಿಲಾಷೆ ಸಲ್ಲಿಸುವೆ
ಈಸು ಸಂಶಯ ಬೇಡ ಭಾಷೆ ಕೊಟ್ಟೆ ॥ ೧೨ ॥

ಶ್ರೀ ಭೀಮಸೇನನ ಆಜ್ಞೆಯಂತೆ ಕೀಚಕನಿಗೆ ತಾನು ಬರುವುದಾಗಿ ಭರವಸೆ ಕೊಡುತ್ತಾಳೆ.

**ಅರ್ಥ:—** ಆ ಶಶಿಮುಖಿ = ಆ ಚಂದ್ರಮುಖಿಯು (ಸೈರಂಧ್ರಿಯು), ಮೋಸಮಾಡಿ ಪೋದಳು = ವಂಚಿಸಿ ನನ್ನ ಕೈ ತಪ್ಪಿಸಿಕೊಂಡಳು, ಎಂದು = ಎಂಬ ಕಾರಣದಿಂದ, ಆಶೆ ಬಿಡದೆ = (ಆಕೆಯ ಸಂಗವನ್ನು ಪಡೆಯುವ) ಆಸೆಯನ್ನು ಬಿಡದೆ ತಾ = ತಾನು, ವ್ಯಸನಗೊಳ್ಳುತ = (ತತ್ಕಾಲದ ಪರಾಭವದಿಂದ) ದುಃಖಿತನಾಗಿ, ಪೂಶರ ತಾಪಕ್ಕೆ = ಪುಷ್ಪಬಾಣನ (ಮನ್ಮಥನ) ತಾಪದಿಂದ, (ಅದರ ಪರಿಹಾರಕ್ಕಾಗಿ), ಕೇಸರಿ ಗಂಧವ = ಕೇಸರಿಗಂಧವನ್ನು (ಪರಿಮಳ ಗಂಧವನ್ನು), ದಾಸಿಯರಿಂದ = ಸೇವಕಿಯ-ರಿಂದ, ಪೂಸಿಕೊಂಡು = ದೇಹಕ್ಕೆ ಲೇಪಿಸಿಕೊಂಡು ;

ಹಾಸುಮಂಚದಲ್ಲಿ = ಶಯ್ಯಾಸಿದ್ಧಮಂಚದಲ್ಲಿ, ಬೀಸಿಕೊಳ್ಳುತಲಿ = ಗಾಳಿಹಾಕಿಸಿಕೊಳ್ಳುತ್ತ, ಘಾಸಿಪಡುತ್ತಿರೆ = ತೊಳಲುತ್ತಿರಲು (ಕಷ್ಟಪಡುತ್ತಿರಲು), ಆ ಸಮಯದಲ್ಲಿ = ಆಗ, (ಸೈರಂಧ್ರಿಯು ಬಂದು), ಲೇಸಾಗಿ = ಯಾವ ನಿರ್ಬಂಧವಿಲ್ಲದೇ (ಚೆನ್ನಾಗಿ = ಪೂರ್ತಿಯಾಗಿ), ನಿನ್ನಭಿಲಾಷೆ = (ನನ್ನ ಸಹವಾಸದ) ನಿನ್ನ ಅಪೇಕ್ಷೆಯನ್ನು, ಸಲ್ಲಿಸುವೆ = ನಡೆಸಿಕೊಡುತ್ತೇನೆ (ಪೂರ್ಣ ಮಾಡುತ್ತೇನೆ), ಈಸು ಸಂಶಯ ಬೇಡ = ಎಷ್ಟು ಮಾತ್ರಕ್ಕೂ ಸಂಶಯವಿಲ್ಲ, ಭಾಷೆ ಕೊಟ್ಟೆ = ಪ್ರಮಾಣ ಮಾಡಿ ಹೇಳುತ್ತೇನೆ (ನಿಶ್ಚಯವಾಗಿ ನಾನು ಸೂಚಿಸಿದ ಸ್ಥಳಕ್ಕೆ ಈ ರಾತ್ರಿ ಬಂದು ಸೇರುತ್ತೇನೆಂದಳು).

ನಳಿನಮುಖಿಯಿಂತು ಪೇಳಿದ ಮಾತನು
ಕೇಳಿ ಹರುಷವನು ತಾಳಿದನಾಕ್ಷಣ
ಖಳನು ಹೊನ್ನಿನ ಜಾಳಿಗೆ ಕೊಟ್ಟ-
ನ್ನಳಿಯದಲೆ ರತಿಕೇಳಿಗಾಗಿ

ಕಾಳಗದ ಮನೆಯೊಳಗೆ ಬಾರೆಂದು
ಪೇಳಿದ ಸುಳುಹನು ಪೇಳಲು ಭೀಮಗೆ
ಖೂಳನ ಕಾಯವ ಸೀಳಲು ತಕ್ಕಂಥ
ವೇಳೆ ಬಂತೆನುತ ತೋಳ ಹೊಯ್ದ ॥ ೧೩ ॥

**ಅರ್ಥ:—** ನಳಿನಮುಖಿಯು = ಆ ಕಮಲಮುಖಿಯು (ಸೈರಂಧ್ರಿಯು), ಇಂತು ಪೇಳಿದ ಮಾತನು = ಹೀಗೆ ಹೇಳಿದುದನ್ನು ಕೇಳಿ, ಆ ಕ್ಷಣ = ಕೇಳಿದೊಡನೆ, ಖಳನು = ದುಷ್ಟಕೀಚಕನು, ಹರುಷವನು ತಾಳಿದನು = ಹರ್ಷವನ್ನು ಹೊಂದಿದನು (ಪ್ರಸನ್ನಚಿತ್ತ-ನಾದನು) ; ಹೊನ್ನಿನ ಜಾಳಿಗೆ ಕೊಟ್ಟು = ಭಂಗಾರದ ಬಲೆಯಲ್ಲಿ ಸಿಕ್ಕಿಸಿ,[೧] ಇನ್ನುಳಿಯ-ದಲೆ = ಆ ಮುಂದೆ ಅಲ್ಲಿ ನಿಲ್ಲದೇ, ರತಿಕೇಳಿಗಾಗಿ = ಅಂಗಸಂಗಕ್ಕಾಗಿ (ದೇಹ ಸಂಭೋಗಕ್ಕಾಗಿ), ಕಾಳಗದ ಮನೆಯೊಳಗೆ ಬಾರೆಂದು = ಗರಡಿಮನೆಯೊಳಗೆ (ಆ ರಾತ್ರಿ) ಬರಬೇಕೆಂದು, ಪೇಳಿದ = ಕೀಚಕನಿಗೆ ಹೇಳಿದ, ಸುಳುಹನು = ಸೂಚನೆಯನ್ನು (ವೃತ್ತಾಂತವನ್ನು), ಭೀಮಗೆ = ಭೀಮಸೇನನಿಗೆ, ಪೇಳಲು =(ದ್ರೌಪದಿಯು) ಹೇಳಿದಾಗ, ಖೂಳನ ಕಾಯವ = ದುಷ್ಟ ಕೀಚಕನ ದೇಹವನ್ನು ಸೀಳಲು = ಸೀಳುವುದಕ್ಕೆ (ಸಂಹರಿ-ಸಲು), ತಕ್ಕಂಥ-ಯೋಗ್ಯವಾದ, ವೇಳೆ = ಸಮಯವು, ಬಂತೆನುತ = ಒದಗಿತೆಂದು, ತೋಳ ಹೊಯ್ದ = ಭುಜ ಚಪ್ಪರಿಸಿದನು (ಉತ್ಸಾಹಭರಿತನಾದನು).

**ನಾರಿ ಇನ್ನಾವಾಗ ಬರುವಳೋ ಎಂದು**
**ದಾರಿಯ ನೋಡುವ ಚೋರಕೀಚಕನು**
**ತೋರಿದ ತಾವಿಲಿ ಸೇರುವ ಬೇಗನೆ**
**ಊರೊಳಗಾರೂ ಅರಿಯದಂತೆ**

**ಕ್ರೂರನು ಮೋಹಿಪ ತೆರದಲೆನಗೆ**
**ನಾರಿಯ ರೂಪ ಶೃಂಗರಿಸು ನೀನೆಂದು**
**ವಾರಿಜಮುಖಿಯಳ ಮೋರೆಯ ನೋಡಲು**
**ನೀರೆ ದ್ರೌಪದಿ ತಾ ನಾಚಿದಳು** **॥ ೧೪ ॥**

ಶ್ರೀ ಭೀಮಸೇನನು ದ್ರೌಪದಿಗೆ ಏಕಾಂತದಲ್ಲಿ ಹೇಳುತ್ತಾನೆ:

**ಅರ್ಥ:—** ನಾರಿಯು = ಆ ಸ್ತ್ರೀಯು (ಸೈರಂಧ್ರಿಯು), ಇನ್ನು = ಮತ್ತೆ, ಆವಾಗ ಬರುವಳೋ = ಯಾವಾಗ ಬರುತ್ತಾಳೆಯೋ, ಎಂದು = ಎಂಬುದಾಗಿ, ದಾರಿಯ ನೋಡುವ = (ಗೊತ್ತಾದ ಸ್ಥಳಕ್ಕೆ ಮೊದಲೇ ಹೋಗಿ) ಆತುರದಿಂದ ನಿರೀಕ್ಷಿಸುವ, ಚೋರಕೀಚಕನು = ಕಳ್ಳಕೀಚಕನು, ತೋರಿದ ತಾವಿಲಿ = (ಹೇ ದ್ರೌಪದಿ!) ನೀನು ಹೇಳಿದ ಸ್ಥಳದಲ್ಲಿ (ಗರಡಿಮನೆಯಲ್ಲಿ), ಸೇರುವ = ಹೋಗಿ ಸೇರಿಕೊಳ್ಳುತ್ತಾನೆ ;

---

೧. ಬಲೆಯು ಹೊನ್ನಿನದಾದರೆ ಅದರಲ್ಲಿ ಸಿಕ್ಕಿಬೀಳುವ ಪ್ರಾಣಿಗೆ ಪ್ರಾಣಾಪಾಯದ ವಿಪತ್ತು ತಪ್ಪಿದ್ದಲ್ಲ, ಅದರಂತೆ ಸ್ತ್ರೀಭೋಗಸುಖರೂಪದ ಬಲೆಯನ್ನು ದ್ರೌಪದಿಯು ಕೀಚಕನ ಸುತ್ತ ಬೀಸಿದಳು.

ಬೇಗನೆ = (ಆದ್ದರಿಂದ) ಬೇಗನೆ, (ಅಷ್ಟರೊಳಗಾಗಿ), ಊರೊಳಗೆ ಆರೂ ಅರಿಯ-ದಂತೆ = ಊರಿನ ಜನರಿಗೆ ತಿಳಿಯದಂತೆ (ಯಾರೂ ಗುರ್ತಿಸದಂತೆ ನಾನು ಅಲ್ಲಿಗೆ ಹೋಗಿ ಸೇರಲು ಅನುಕೂಲಿಸುವಂತೆ), ಮತ್ತು, ಕ್ರೂರನು ಮೋಹಿಪತೆರದಲಿ = ಉಗ್ರಕೀಚಕನು ನನ್ನನ್ನು ಮೋಹಿಸುವಂತೆ, ಎನಗೆ = ನನಗೆ, ನಾರಿಯ ರೂಪ ಶೃಂಗರಿಸು = ಸ್ತ್ರೀ ರೂಪವು ಒಪ್ಪುವಂತೆ ಅಲಂಕರಿಸು, ನೀನು, ಎಂದು = ಎಂದು ಹೇಳಿ, ವಾರಿಜಮುಖಿಯಳ = ಕಮಲಮುಖಿಯ (ದ್ರೌಪದಿಯ), ಮೋರೆಯ ನೋಡಲು = ಮುಖವನ್ನು (ಭೀಮ-ಸೇನನು) ನೋಡಲು, ನೀರೆ ದ್ರೌಪದಿ = ಚೆಲುವೆ ದ್ರೌಪದಿಯು, ತಾ = ತಾನು, ನಾಚಿದಳು = ಲಜ್ಜಿತಳಾದಳು (ಪುರುಷಶ್ರೇಷ್ಠನಿಗೆ ಸ್ತ್ರೀರೂಪವನ್ನು ಹೊಂದಿಸುವುದು ಹೇಗೆಂದು ನಾಚಿಕೆಪಟ್ಟಳು).

**ಬಟ್ಟ ಮುಖಕೆ ತಾನಿಟ್ಟಳು ಸಾದಿನ**
**ಬಟ್ಟನು ಪಣೆಯೊಳು ಇಟ್ಟು ಕಣ್ಣು ಕಪ್ಪು।**
**ಪಟ್ಟೆ ಪೀತಾಂಬರ ಉಟ್ಟುಕೊ ನೀನೆಂದು**
**ಪುಟ್ಟಾಣಿಕುಪ್ಪುಸ ಕೊಟ್ಟಳಾಗ**

**ಕಟ್ಟಾಣಿ ಮುತ್ತನು ಕಟ್ಟೆ ತಾ ಕೊರಳಿಗೆ**
**ಘಟ್ಟ್ಯಾಗಿ ಚಿನ್ನದ ಪಟ್ಟೆ ಉಡಿದಾರ**
**ಧಿಟ್ಟನೆ ಬೆರಳಿಗೆ ಇಟ್ಟಳು ಉಂಗುರ**
**ವಿಟ್ಟರದೃಷ್ಟಿಯು ತಾಕುವಂತೆ** **॥ ೧೫ ॥**

ದ್ರೌಪದಿಯು ನಾಚುತ್ತ, ಪತಿಯ ಆಜ್ಞೆಯಂತೆ ಆತನಿಗೆ ಹೆಣ್ಣಿನ ಅಲಂಕಾರವನ್ನು ಮಾಡುತ್ತಾಳೆ :—

**ಅರ್ಥ** :— ಬಟ್ಟ ಮುಖಕೆ = ವಿಶಾಲವಾದ (ಅಗಲವಾದ) ಮುಖಕ್ಕೆ, ಪಣೆಯೊಳು = ಹಣೆಯಲ್ಲಿ, ಸಾದಿನ ಬಟ್ಟನು = ಸಾದಿನ ಚುಕ್ಕೆಯನ್ನು (ದುಂಡು ತಿಲಕ-ವನ್ನು), ತಾನಿಟ್ಟಳು = ದ್ರೌಪದಿಯು ಇಟ್ಟಳು (ಅಂದವಾದ ತಿಲಕವನ್ನು ರಚಿಸಿದಳು) ; ಕಣ್ಣುಕಪ್ಪು = ಕಾಡಿಗೆಯನ್ನು , ಇಟ್ಟು = (ಕಣ್ಣಿಗೆ) ಹಚ್ಚಿ, ಪಟ್ಟೆ ಪೀತಾಂಬರ = ಜರತಾರಿ-ಪೀತಾಂಬರವನ್ನು, ಉಟ್ಟುಕೊ ನೀನೆಂದು = ನೀವೇ ಉಟ್ಟುಕೊಳ್ಳಿರೆಂದು, ಹೇಳಿ, ಆಗ = (ಹಾಗೆ ಉಟ್ಟ) ನಂತರ, ಪುಟ್ಟಾಣಿ ಕುಪ್ಪುಸವ = ಅಂದವಾಗಿ ಸಣ್ಣದಾದ ಕುಪ್ಪುಸವನ್ನು, ಕೊಟ್ಟಳು = ತೊಡಲು ಕೈಗಿತ್ತಳು.

ಕಟ್ಟಾಣಿ ಮುತ್ತನು = ಒಳ್ಳೆಯ ಮುತ್ತಿನ ಹಾರವನ್ನು, ತಾ = ತಾನೇ, ಕೊರಳಿಗೆ

ಕಟ್ಟಿ = (ಭೀಮಸೇನನ) ಕಂಠದಲ್ಲಿ ಬಿಗಿದು (ಬೀಳದಂತೆ ಹಾಕಿ), ಚಿನ್ನದ ಪಟ್ಟಿ ಉಡಿದಾರ = ಭಂಗಾರದ (ಜರತಾರಿಯ) ಪಟ್ಟೆಯನ್ನು (ನಡುಗಂಟನ್ನು), ಕಟ್ಟಿ = ಬಿಗಿದು (ಪೀತಾಂಬರದ ಮೇಲೆ ಸೊಂಟದಲ್ಲಿ ಕಟ್ಟಿ), ವಿಟ್ಟರ = ವಿಟಪುರುಷರ (ಪರಸ್ತ್ರೀ ವ್ಯಾಮೋಹವುಳ್ಳ ಪುರುಷರ), ದೃಷ್ಟಿಯು ತಾಕುವಂತೆ = ಆಕರ್ಷಿಸುವಂತೆ (ವಿಟರು ಮೋಹಿಸುವಂತೆ), ದಿಟ್ಟನೆ = ತಕ್ಷಣ (ಅಥವಾ ಧೈರ್ಯದಿಂದ = ನಾಚಿಕೆಪಡದೇ), ಬೆರಳಿಗೆ = ಭೀಮಸೇನನ ಕೈಬೆರಳಿಗೆ, ಇಟ್ಟಳು ಉಂಗುರ = ಉಂಗುರವನ್ನು ತೊಡಿಸಿದಳು.

**ಮುತ್ತಿನ ಮೂಗುತಿ ಕೆತ್ತಿದ ವಾಲೆಯು**
**ಇತ್ತೆರ ಬುಗುಡಿಯು ನೆತ್ತಿಗೆ ಅರಳೆಲೆ**
**ಚಿತ್ತದ ರ್‍ಯಾಗಟೆ ಉತ್ತಮ ಕ್ಯಾದಿಗೆ**
**ವತ್ತಿಲಿ ಶ್ಯಾವಂತಿಗೂವು ಗೊಂಡ್ಯ**

**ಹಸ್ತಕಡಗವು ಮತ್ತೆ ಚೂಡ್ಯ ವಂಕಿ**
**ಮುತ್ತಿನ ಹಾರವು ರತ್ನದ ಪದಕವು**
**ಆರ್ಥಿಲಿ ನಾರಿಯು ಕುತ್ತಿಗ್ಯೆ ಹಾಕಲು**
**ಹಸ್ತಿನಿಯೋ ಈಕೆ ಚಿತ್ತಿನಿಯೋ** ॥ ೧೬ ॥

ದ್ರೌಪದಿಯು ಶ್ರೀಭೀಮಸೇನನ ಅಲಂಕಾರವನ್ನು ಮುಂದುವರಿಸುತ್ತಾಳೆ :–

**ಅರ್ಥ:**— ಮುತ್ತಿನ ಮೂಗುತಿ = ಮುತ್ತಿನ ಮುಖರ, ಕೆತ್ತಿದ ವಾಲೆಯು = ಚಿತ್ರಿಸಿದ ವಾಲೆ (ಓಲೆ)ಗಳು, ಇತ್ತೆರ ಬುಗುಡಿಯು = (ಎರಡು ಕಿವಿಗಳಲ್ಲಿ) ಬುಗುಡಿಗಳು, (ಮೂಗಿನಲ್ಲಿ ಮೂಗುತಿ, ಕಿವಿಗಳಲ್ಲಿ ಓಲೆಗಳು ಮತ್ತು ಬುಗುಡಿಗಳು ಸ್ತ್ರೀಯರ ಸೌಭಾಗ್ಯಸೂಚಕ ಆಭರಣಗಳು), ನೆತ್ತಿಗೆ = ತಲೆಯ ಮೇಲೆ (ಬೈತಲೆಯ ಮೇಲೆ ಧರಿಸುವ), ಅರಳೆಲೆ, ಚಿತ್ರದ ರ್‍ಯಾಗಟೆ = ಚಿತ್ರಗಳುಳ್ಳ 'ರಾಗಟೆ' ಎಂಬ (ತಲೆಯ ಹಿಂಭಾಗದಲ್ಲಿ ನೆತ್ತಿಯ ಕೆಳಗೆ ಧರಿಸುವ) ಆಭರಣ, ಉತ್ತಮ ಕ್ಯಾದಿಗೆ = (ರಾಗಟೆಯ ಕೆಳಗೆ ಹೆರಳ ಮೇಲೆ ಧರಿಸುವ) ಕೇದಿಗೆಪುಷ್ಪದ ಆಕಾರವುಳ್ಳ ಸುವರ್ಣಪುಷ್ಪ, ವತ್ತಿಲಿ = ಅದಕ್ಕೆ ಹೊಂದಿಕೊಂಡು, ಶ್ಯಾವಂತಿಗೂವು = ಸುವರ್ಣದ ಸೇವಂತಿಗೆ ಪುಷ್ಪ (ಮತ್ತು) ಗೊಂಡ್ಯ = ಹೆರಳಿನ ಇಳಿಯಿಂದ ತೂಗಾಡುವ ಭಂಗಾರದ ಗೊಂಡ್ಯಗಳು ;

ಹಸ್ತಕಡಗವು = ಕೈಗೆ ಕಡಗಗಳು, ಮತ್ತೆ = ಹಾಗೂ, ಚೂಡ್ಯವಂಕಿ = ಮೇಲ್ತೋಳ-ಯಲ್ಲಿ ಧರಿಸುವ ವಂಕಿಗಳು (ಇವುಗಳನ್ನಿಟ್ಟು), ಮುತ್ತಿನ ಹಾರವು, ಮುತ್ತಿನ ಸರವನ್ನೂ, ರತ್ನದ ಪದಕವು = (ಆ ಸರದ ಮಧ್ಯದಲ್ಲಿರುವ) ರತ್ನದ ಪದಕದೊಂದಿಗೆ, ಅರ್ಥಿಲಿ =

ಆದರದಿಂದ, ನಾರಿಯು = ದ್ರೌಪದಿಯು, ಕುತ್ತಿಗ್ಗೆ ಹಾಕಲು = (ಭೀಮಸೇನನ) ಕಂಠ-ದಲ್ಲಿ ಹಾಕಲು, ಈಕೆ = ಈಕೆಯು (ಸ್ತ್ರೀವೇಷದ ಭೀಮಸೇನನು), ಹಸ್ತಿನಿಯೋ ಚಿತ್ತಿ-ನಿಯೋ = ಹಸ್ತಿನಿಯೋ ಚಿತ್ತಿನಿಯೋ ಎಂದು ನೋಡಿದವರು ಆಶ್ಚರ್ಯ ಪಡು-ವಂತಾದಳು.[೧]

**ಮುಡಿಗೆ ಮಲ್ಲಿಗೆ ಮುಡಿಸಿ ಸುಗಂಧ**
**ತೊಡೆದು ತಾಂಬೂಲ ಮಡಿಸಿಕೊಡುತಲಿ**
**ಪ್ರೌಢನ ಸ್ತ್ರೀರೂಪ ನೋಡಲು ಖೂಳನು**
**ಕೂಡದೆ ಪ್ರಾಣವ ಬಿಡನೆಂದಳು**

**ಮಾಡಿದ್ಯೋಚನೆ ಕೈಗೂಡಿತು ಇಂದಿಗೆ**
**ನೋಡು ಆ ಕೃಷ್ಣನು ಹೂಡಿದ ಆಟವ**
**ಮಡದಿ ನೀನೆನ್ನ ಒಡನೆ ಬಾರೆಂದು**
**ನಡೆದನಾ ಖಳನ ಬಿಡಾರಕೆ** ॥ ೧೭ ॥

ದ್ರೌಪದಿಯು ಅಲಂಕಾರವನ್ನು ಮುಗಿಸಿ ಮೇಲೆ ಒಪ್ಪಕೊಡುವ ಪರಿಯನ್ನು ವರ್ಣಿಸುತ್ತಾರೆ:—

**ಅರ್ಥ:—** ಮುಡಿಗೆ = ಕೇಶಗ್ರಂಥಿಗೆ (ಹೆರಳ ಗಂಟಿನಲ್ಲಿ), ಮಲ್ಲಿಗೆ ಮುಡಿಸಿ = ಮಲ್ಲಿಗೆ ಹೂವಿನ ದಂಡೆಯನ್ನು ಮುಡಿಸಿ, ಸುಗಂಧ ತೊಡೆದು = (ಮೈಗೆ) ಪರಿಮಳ-ಗಂಧವನ್ನು ಹಚ್ಚಿ (ಲೇಪಿಸಿ), ತಾಂಬೂಲ ಮಡಿಸಿ ಕೊಡುತಲಿ = ತಾಂಬೂಲವನ್ನು ಮೆಲ್ಲಲು ಅಣಿಮಾಡಿ ಕೈಗೆ ಕೊಡುತ್ತ, ಖೂಳನು = ದುಷ್ಟ ಕೀಚಕನು, ಪ್ರೌಢನ = ಪುಷ್ಟನಾದ ಭೀಮಸೇನನ, ಸ್ತ್ರೀರೂಪ ನೋಡಲು = ಸ್ತ್ರೀರೂಪವನ್ನು ಕಂಡು, ಕೂಡದೆ = (ಈ ಸ್ತ್ರೀಯನ್ನು) ಸೇರದೇ, ಪ್ರಾಣವ ಬಿಡನು = ಪ್ರಾಣವನ್ನು ಬಿಡುವುದಿಲ್ಲ (ಕೂಡಿಯೇ ಮೃತನಾಗುತ್ತಾನೆ), ಎಂದಳು = ಎಂಬ ತನ್ನ ನಿಶ್ಚಯವನ್ನು ನುಡಿದಳು ;

(ಭೀಮಸೇನನು) ಮಾಡಿದ್ಯೋಚನೆ = (ಶ್ರೀಕೃಷ್ಣನ) ಆಲೋಚನೆಯು (ಸಂಕಲ್ಪವು); ಇಂದಿಗೆ = ಈ ದಿನ, ಕೈಗೂಡಿತು = ಸಿದ್ಧವಾಯಿತು. ಮಡದಿ = ಹೇ

೧. ಹಸ್ತಿನಿ, ಚಿತ್ತಿನಿ, ಶಂಖಿಣಿ ಮತ್ತು ಪದ್ಮಿನಿ ಎಂದು ಕಾಮಿನಿಯರು (ಸ್ತ್ರೀಯರು) ನಾಲ್ಕು ವಿಧ. ಅದರಲ್ಲಿ ಹಸ್ತಿನಿ, ಚಿತ್ತಿನಿ ಜಾತಿಯ ಸ್ತ್ರೀಯರು ಹೆಚ್ಚು ಆಕರ್ಷಕರು. ಪದ್ಮಿನಿ ಜಾತಿಯವರು ಪಾತಿವ್ರತ್ಯಾದಿ ಸದ್ಗುಣಶೀಲರೆಂದು ಹೇಳಲಾಗುತ್ತದೆ. 'ಚಿತ್ತಿನಿ' ಯನ್ನು 'ಚಿತ್ರಿಣಿ' ಎಂದೂ ಕರೆಯಲಾಗುತ್ತದೆ. ಈ ನಾಲ್ಕು ಜಾತಿಯ ಸ್ತ್ರೀಯರ ಲಕ್ಷಣ ವಿವರಗಳನ್ನು ಕಾಮಶಾಸ್ತ್ರದಿಂದ (ರತಿಮಂಜರಿಯಿಂದ) ತಿಳಿಯಬಹುದು.

ದ್ರೌಪದಿ ! ಆ ಕೃಷ್ಣನು ಹೂಡಿದ ಆಟವ ನೋಡು[೧] - ಶ್ರೀಕೃಷ್ಣನು ಮುಂದುಮಾಡಿದ ನಾಟಕವನ್ನು ನೋಡು ; (ನೋಡಲಿಕ್ಕೆ) ನೀನು ಎನ್ನ ಒಡನೆ ಬಾರೆಂದು = ನೀನು ನನ್ನೊಂದಿಗೆ (ಗರಡಿಮನೆಗೆ) ಬಾ ಎಂದು ನುಡಿದು, ಆ ಖಳನ ಬಿಡಾರಕೆ = ಆ ದುಷ್ಟ ಹಾತೊರೆದು ಬರುವ ಆ ಸಂಕೇತಿತ ಸ್ಥಳಕ್ಕೆ, ನಡೆದನು = ಹೊರಟನು (ಹೆಜ್ಜೆ ಇಟ್ಟನು).

**ಇಂದುಮುಖದ ಅರವಿಂದನಯನದ**
**ಮಂದಗಮನೆಯು ಬಂದಳು ಎನ್ನುತ**
**ನಂದನ ತನಯನ ಕಂದನ ಬಾಧೆಗೆ**
**ಕಂದಿ ಕುಂದಿ ಬಹುನೊಂದೆನೆಂದ**
**ಹಿಂದಿನಾ ಸುಕೃತದಿಂದಲಿ ನಿನ್ನೊಳಾ**
**ನಂದವಾಗಿಹುದು ಇಂದಿಗೆ ಕೂಡಿತು**
**ಕುಂದಣದಾಭರಣ ತಂದೆ ನಿನಗಾಗಿ**
**ಚಂದದಿಟ್ಟು ನೀನಂದವಾಗೆ** **॥ ೧೮ ॥**

ಗರಡಿಮನೆಯ ಮಂಚದಲ್ಲಿ ಸ್ತ್ರೀ ವೇಷಧಾರಿ ಶ್ರೀಭೀಮಸೇನನು ಹೋಗಿ ಮಲಗಿದನಂತರ ಕೀಚಕನು ಅಲ್ಲಿಗೆ ಬಂದು ಆತನೊಂದಿಗೆ ಮಾತನಾಡುವ ಬಗೆಯನ್ನು ವರ್ಣಿಸುತ್ತದೆ ಈ ನುಡಿ :–

**ಅರ್ಥ:—** ಇಂದುಮುಖದ = ಚಂದ್ರನಂತೆ (ಆಹ್ಲಾದಕರ) ಮುಖವುಳ್ಳ ಅರವಿಂದನಯನದ[೨] = ಕಮಲದಂತೆ (ವಿಶಾಲವಾದ) ಕಣ್ಣುಗಳುಳ್ಳ, ಮಂದ–ಗಮನೆಯು[೩] = ಮೆಲ್ಲನೆ (ಹೆಜ್ಜೆಯ ಮೇಲೆ ಹೆಜ್ಜೆಯನಿಟ್ಟು), ನಡೆಯುವ ಸ್ತ್ರೀಯು, (ನನ್ನ ಸೈರಂಧ್ರಿಯು), ಬಂದಳು (ಇನ್ನೇನು, ಬಂದು ಒದಗಿದ್ದಾಳೆ), ಎನ್ನುತ = (ಮನಸ್ಸಿನಲ್ಲಿ) ಅಂದುಕೊಳ್ಳುತ್ತ, ನಂದನ ತನಯನ ಕಂದನಬಾಧೆಗೆ = ಶ್ರೀಕೃಷ್ಣನ ಪುತ್ರನಾದ ಪ್ರದ್ಯುಮ್ನನ (ಮನ್ಮಥನ) ಬಾಧೆಗೆ, ಕಂದಿ = ತಾಪದಿಂದ ಬಾಡಿ, ಕುಂದಿ = ಮುದುಡಿ, ಬಹು

---

೧. ಕೀಚಕನ ಸಾಧನಪೂರ್ತಿಯನ್ನು ಗಮನಿಸಿ ಆತನ ವಧೆಯು ಇಂದು ನಡೆಯಲೆಂದು ಶ್ರೀಕೃಷ್ಣನು ಸಂಕಲ್ಪಿಸಿ ಸ್ತ್ರೀವೇಷಧಾರಿಯಾದ ನನ್ನಿಂದ ಕೊಲ್ಲಿಸುವ ಈ ನಾಟಕವನ್ನು ನೋಡು ಬಾ – ಎನ್ನುತ್ತಾನೆ ಭೀಮಸೇನ (ಶ್ರೀಹರಿಯು ತನ್ನಲ್ಲಿ ನಿಂತು ತನ್ನ ಮೂಲಕ ಕೀಚಕನನ್ನು ಸಂಹರಿಸುವನೆಂಬ ದೃಢನಿಶ್ಚಯವುಳ್ಳವನು – ಭೀಮಸೇನ).

೨. ವಿಕಸಿತ (ಅರಳಿದ – ವಿಶಾಲವಾದ) ಕಣ್ಣುಗಳು ಹರ್ಷಚಿತ್ತವನ್ನು ಸೂಚಿಸುತ್ತವೆ.

೩. ಮಂದಗಮನವು ನಿರ್ಭಯವನ್ನೂ ಗಾಂಭೀರ್ಯವನ್ನೂ ಸೂಚಿಸುತ್ತದೆ.

ನೊಂದೆನು ಎಂದ = (ಇಷ್ಟು ದಿನ) ಬಹು ವ್ಯಥೆಪಟ್ಟೆನು, ಈಗ ಅದರ ಪರಿಹಾರಕಾಲವು ಸನ್ನಿಹಿತವಾಗಿದೆ, ಎಂದು ತಿಳಿದನು —

ಒಳಗೆ ಮಲಗಿದ್ದ ಭೀಮಸೇನನನ್ನು ಸೈರಂಧ್ರಿಯೆಂದು ಭ್ರಮಿಸಿ ಕೀಚಕನು ಮಾತನಾಡುತ್ತಾನೆ :—

ಹಿಂದಿನ ಸುಕೃತದಿಂದಲಿ = (ನನ್ನ) ಪೂರ್ವಪುಣ್ಯದಿಂದ, ನಿನ್ನೊಳು = ನಿನ್ನನ್ನು ಸೇರಿ, ಆನಂದವಾಗಿಹುದು = ಆನಂದದಿಂದಿರುವುದು, ಇಂದಿಗೆ ಕೂಡಿತು = ಈಗ ಸಾಧಿಸಿತು ; ಕುಂದಣದಾಭರಣ = ಚಿನ್ನದಲ್ಲಿ ಕೂಡಿಸಿದ ರತ್ನಾಭರಣಗಳನ್ನು, ನಿನಗಾಗಿ = ನಿನಗೋಸ್ಕರ (ನನ್ನ ಪ್ರೇಮಸೂಚಕವಾಗಿ), ತಂದೆ = ತಂದಿದ್ದೇನೆ ; ಚಂದದಿಟ್ಟು = ಅವುಗಳಿಂದ ಅಲಂಕರಿಸಿಕೊಂಡು, ನೀ = ನೀನು, ನಂದವಾಗೆ = ಸಂತೋಷಿಸು ಸೈರಂಧ್ರಿ!

**ಗುಲ್ಲು ಮಾಡದಿರೊ ಮೆಲ್ಲನೆ ಮಾತಾಡೊ**
**ವಲ್ಲಭರ್ಕಂಡರೆ ಹಲ್ಲುಮುರಿವರೊ**
**ಬಲ್ಲವ ನಿನಗೆ ಸಲ್ಲದು ಈ ಕಾರ್ಯ**
**ಗೆಲ್ಲಲರಿಯೆ ಕೊಲ್ಲಿಸಿಕೊಂಬೆ**
**ಚಲ್ವೆ ಕೇಳು ನಿನ್ನ ಹುಲ್ಲೆ ಗಣ್ಣ ನೋಟ**
**ಕೊಲ್ವ ಬಗೆಗೆ ನಾ ಗೆಲ್ಲಲಾರೆನೆಂದು**
**ಗಲ್ಲ ಮುದ್ದಿಟ್ಟು ಮೈಯ್ಯೆಲ್ಲವ ಹುಡುಕಲು**
**ಕಲ್ಲೆದೆಯಲ್ಲಿರೆ ಖುಲ್ಲ ನೊಂದ** ॥ ೧೯ ॥

ಈ ನುಡಿ ಮತ್ತು ಮುಂದಿನ ೨ ನುಡಿಗಳಲ್ಲಿ ಶ್ರೀಭೀಮಸೇನ ಮತ್ತು ಕೀಚಕನ ಸಂವಾದವು ವರ್ಣಿಸಲ್ಪಟ್ಟಿದೆ[1]:—

**ಅರ್ಥ:**— ಗುಲ್ಲುಮಾಡದಿರೊ = ಶಬ್ದ ಮಾಡಬೇಡ (ಗಲಾಟೆ ಮಾಡದಿರು), ಮೆಲ್ಲನೆ ಮಾತಾಡೊ = ಸಣ್ಣ ಧ್ವನಿಯಿಂದ ಮಾತಾಡು, ವಲ್ಲಭರ್ = (ನನ್ನ) ಪತಿಗಳು, ಕಂಡರೆ = (ಈ ನಮ್ಮ ಸಮಾಗಮವನ್ನು) ತಿಳಿದರೆ, ಹಲ್ಲು ಮುರಿವರೊ = (ನಿನ್ನ) ಹಲ್ಲು-ಗಳನ್ನು ಮುರಿಯುತ್ತಾರೆ ; ಬಲ್ಲವ = (ಪರಸ್ತ್ರೀ ಸಂಗವು ಮಹಾವಿಪತ್ತಿಗೆ ಕಾರಣವಾಗುವ ಅಪರಾಧವೆಂಬುದನ್ನು) ತಿಳಿದಿರುವ ಹೇ ಕೀಚಕ ! ನಿನಗೆ ಸಲ್ಲದು ಈ ಕಾರ್ಯ = (ನನ್ನೊಡನೆ ಸರಸಾಟದ) ಈ ಕಾರ್ಯವು ನಿನಗೆ ಯೋಗ್ಯವಲ್ಲ ; **ಅಥವಾ**

---

೧. ಭೀಮಸೇನದೇವನು ದ್ರೌಪದೀದೇವಿಯ ಧ್ವನಿಗೆ ಸ್ವಲ್ಪವೂ ಭೇದತೋರದಂತೆ ಕೀಚಕನೊಡನೆ ಮಾತಾಡಿದುದು ಅವನ ಸರ್ವಶಕ್ತಿತ್ವವನ್ನು (ಸರ್ವಕಲಾಕೌಶಲವನ್ನು) ಸೂಚಿಸುತ್ತದೆ !

ಬಲ್ಲವ = (ಸರ್ವವನ್ನೂ = ಯುದ್ಧವನ್ನೂ) ಬಲ್ಲವನಾದವನು, ನನ್ನ ಪತಿಯು (ಭೀಮಸೇನನು) ; ಗೆಲ್ಲಲರಿಯೆ = (ಅವನನ್ನು) ಜಯಿಸಲಾರೆ, ಕೊಲ್ಲಿಸಿಕೊಂಬೆ = (ಅವನಿಂದ) ಸಾಯುತ್ತಿ ; ಈ ಕಾರ್ಯ = (ಅವನೊಂದಿಗೆ ಸೆಣಸುವ) ಈ ಕಾರ್ಯವು, ನಿನಗೆ ಸಲ್ಲದು = ನಿನ್ನಿಂದ ಆಗದುದು ;

ಹೀಗೆಂದ ಭೀಮಸೇನನ ಮಾತಿಗೆ ಕೀಚಕನು ಹೇಳುತ್ತಾನೆ :—

ಚೆಲ್ವೆ = ಹೇ ಸುಂದರಿ ! ಕೇಳು = ತಿಳಿದುಕೊ ; ನಿನ್ನ ಹುಲ್ಲೆ ಗಣ್ಣ ನೋಟ = ನಿನ್ನ ಹರಿಣಾಕ್ಷಿಗಳ ನೋಟವು, ಕೊಲ್ವ ಬಗೆಗೆ = (ನನ್ನನ್ನು) ಕೊಲ್ಲುತ್ತಿರುವ ರೀತಿಯನ್ನು, ನಾ ಗೆಲ್ಲಲಾರೆನು = ನಾನು (ನಿಜವಾಗಿಯೂ) ಎದುರಿಸಲಾರೆನು (ಅದನ್ನು ಜಯಿಸುವುದೆಂತು?), ಎಂದು = ಎಂದು ಹೇಳುತ್ತ, ಗಲ್ಲಮುದ್ದಿಟ್ಟು = ಕಪೋಲವನ್ನು ಚುಂಬಿಸಿ, **ಅಥವಾ** ಹುಲ್ಲೆಗಣ್ಣ ನೋಟ ಕೊಲ್ವ ಬಗೆಗೆ = ಚಪಲಕಟಾಕ್ಷದಿಂದ ನನ್ನ ಪ್ರಾಣಗಳನ್ನೇ ಸೆಳೆದುಕೊಳ್ಳುತ್ತಿರುವ ನೋಟವುಳ್ಳ ನಿನಗೆ, ನಾ ಗೆಲ್ಲಲಾರೆನೆಂದು = (ನಿನ್ನ ಪತಿಗಳನ್ನು) ಗೆಲ್ಲಲಾಗುವುದಿಲ್ಲವೆಂದು ತೋರಿತೇ ? ಎನ್ನುತ್ತ, ಗಲ್ಲವ ಮುದ್ದಿಟ್ಟು, ಮೈಯ್ಯೆಲ್ಲವ ಹುಡುಕಲು = ದೇಹವನ್ನೆಲ್ಲಾ (ಸ್ತನಭಾಗವನ್ನು ದೊರಕಿಸಲು) ತಡಕುತ್ತಿರಲು, ಎದೆಯಲ್ಲಿ ಕಲ್ಲು ಇದೆ = ಇದೇನು ಎದೆಯು ಕಲ್ಲಿನಂತೆ ದೃಢವಾಗಿದೆ ಎಂದು, ಖುಲ್ಲ = ದುರುಳ ಕೀಚಕನು, ನೊಂದ = ಚಕಿತನಾದನು (ಮೋಸವಾಯಿತೆಂದು) ವ್ಯಥೆಪಟ್ಟನು.

**ನಾರಿಯೊ ನೀನೇನು ಮಾರಿಯೊ ಇನ್ನೊಂದು**
**ಬಾರಿ ಎನಗೆ ನಿನ್ನ ಮೋರೆ ತೋರಿಸೆಂದು**
**ಧೀರನ ಸಮೀಪ ಬಾರದೆ ಓಡುವ**
**ದಾರಿಯ ನೋಡುತ್ತಲಿರಲಾಗ**

**ಬಾರದಂಥ ಪರನಾರೇರ ಮೋಹಿಪ**
**ಕ್ರೂರಗೆ ಈ ರೂಪ ಘೋರವಾಗಿಹುದು**
**ಸಾರದ ಮಾತಿದು ಯಾರಾದರೇನೀಗ**
**ಮಾರನ ತಾಪವ ಹಾರಿಸುವೆ ॥ ೨೦ ॥**

**ಅರ್ಥ:—** ನಾರಿಯೊ ನೀನೇನು ಮಾರಿಯೊ = (ಕಲ್ಲಿನಂತೆ ಕಠಿಣವಾದ ವಕ್ಷಸ್ಥಳವನ್ನು ಮುಟ್ಟಿ ಚಕಿತನಾದ ಕೀಚಕನು) ನೀನು ಸ್ತ್ರೀಯೋ ಅಥವಾ ಮೃತ್ಯುದೇವತೆಯೋ, ಇನ್ನೊಂದು ಬಾರಿ = ಮತ್ತೊಮ್ಮೆ, ಎನಗೆ = ನನಗೆ, ನಿನ್ನ ಮೋರೆ

ತೋರಿಸು = ನಿನ್ನ ಮುಖವನ್ನು ತೋರಿಸು, ಎಂದು =ಎನ್ನುತ್ತ, ಧೀರನ = ಭೀಮಸೇನನ, ಸಮೀಪ ಬಾರದೆ = ಹತ್ತಿರಕ್ಕೆ ಬರದೇ, ಓಡುವ ದಾರಿಯ ನೋಡುತ್ತಿರಲು = ಅಲ್ಲಿಂದ ಓಡಿಹೋಗುವ ಯತ್ನದಲ್ಲಿರಲು, ಆಗ = ಕೀಚಕನ ಈ ಸ್ಥಿತಿಯನ್ನು ತಿಳಿದು, ಬಾರದಂಥ ಪರನಾರೇರ = ಒಪ್ಪಿ ಬರದಂಥ ಪರಸ್ತ್ರೀಯರನ್ನು, ಮೋಹಿಪ = ಮೋಹಿಸುವ (ಪಡೆ-ಯಲು ಆಶಿಸುವ), ಕ್ರೂರಗೆ = (ಆ ಸ್ತ್ರೀಯರ ಮನಸ್ಸನ್ನು ನೋಯಿಸುವ) ಉಗ್ರಸ್ವಭಾವ-ದವನಿಗೆ, ಈ ರೂಪ-ಈ ನನ್ನ ರೂಪವು, ಘೋರವಾಗಿಹುದು = ಭಯಂಕರವಾಗಿರು-ವುದು,[೧] ಇದು ಸಾರದ ಮಾತು = ನನ್ನ ರೂಪ ಇಂಥದೆಂಬುದು ಸತ್ಯವಾದ ಮಾತು ; ಯಾರಾದರೇನು = (ನೀನು) ಎಂಥವನಾದರೇನು, ಈಗ, ಮಾರನ ತಾಪವ = (ನಿನ್ನ) ಮನ್ಮಥನ ತಾಪವನ್ನು , ಹಾರಿಸುವೆ = ಹೋಗಲಾಡಿಸುತ್ತೇನೆ (ಇಲ್ಲದಂತೆ ಮಾಡುತ್ತೇನೆ).[೨]

**ಶುದ್ಧ ಹೆಣ್ಣೆಂದು ಪ್ರಸಿದ್ಧವಾಗಿದೆ ಎನ್ನ**
**ವಿದ್ಯವ ನಿನಗೀ ಸದ್ಯಕೆ ತೋರುವೆ**
**ನಿದ್ರೆ ಕೆಡುವಂಥ ಬುದ್ಧಿಯು ನಿನ್ನದು**
**ಸದ್ದು ಮಾಡದೆ ಮುದ್ದಿ ಸೆನ್ನ**
**ಬುದ್ಧಿವಂತೆಂದು ವದ್ದಿಗೆ ಹೋಗಲು**
**ಎದ್ದು ಸಮೀರಜ ಗುದ್ದಲು ಕೀಚಕ**
**ಬಿದ್ದನು ಭೂಮಿಲಿ ಗೆದ್ದೆನೆನುತ ಅನಿ-**
**ರುದ್ಧನ ಸ್ಮರಿಸುತಲೆದ್ದ ಭೀಮ** **॥ ೨೧ ॥**

**ಅರ್ಥ:—** ಶುದ್ಧ ಹೆಣ್ಣೆಂದು[೩] = (ನಾನು) ಪರಿಶುದ್ಧ ಸ್ತ್ರೀಯೆಂದು, ಪ್ರಸಿದ್ಧ-

---

೧. ಭೀಮಸೇನನ ರೂಪವು ಪಾಪಿಗಳಿಗೆ ಭಯಂಕರವು – ಸಜ್ಜನರಿಗೆ ಸೌಮ್ಯವು ; ಯಮನಂತೆ.

೨. ಮನ್ಮಥನ ತಾಪವು ತತ್ಕಾಲದಲ್ಲಿ ಪರಿಹಾರವಾಗುತ್ತದೆ – ಆ ದೇಹವೇ ಬಿದ್ದು ಹೋಗುವುದರಿಂದ (ಮರಣದಿಂದ).

೩. 'ಪರಪುರುಷನ ಸ್ಪರ್ಶವಿಲ್ಲದ ಶುದ್ಧಸ್ತ್ರೀಯೆಂದು ನಾನು ಪ್ರಸಿದ್ಧಳಾದ್ದರಿಂದ ಶಬ್ದಮಾಡದೆ, ಚುಂಬನಾದಿಗಳನ್ನು ಮಾಡು,' ಎಂದು ದ್ರೌಪದಿಯನ್ನನುಕರಿಸಿ, ಶ್ರೀಭೀಮಸೇನನು ಮಾತನಾಡುತ್ತಾನೆ. ಎಲ್ಲ ಜೀವರಿಗೆ ಪರಮಪುರುಷನಾದ ಶ್ರೀಹರಿಯೇ ಪತಿಯು ; ಜೀವೋತ್ತಮನಾದ ಶ್ರೀಭೀಮಸೇನನು, ದೋಷದೂರನಾದ್ದರಿಂದ 'ಶುದ್ಧ ಹೆಣ್ಣು', ಶ್ರೀಹರಿಯನ್ನೇ ಪತಿಯಾಗಿ ಉಳ್ಳವನು. ಈತನಿಗೆ ಮುಕ್ತಿಯಲ್ಲಿ ಸ್ತ್ರೀರೂಪದಿಂದ, ಪರಮಾತ್ಮನ ಅಂಗಸಂಗದಿಂದ ರತಿಸೌಖ್ಯವೂ ಉಂಟು (ಬೃ.ಭಾ.) ಶ್ರೀಹರಿಯ ಅಂಗಸಂಗಕ್ಕೆ ಸಹ, ಅರ್ಹವಾದ ಶುದ್ಧ ಹೆಣ್ಣದು.

ವಾಗಿದೆ = (ಜ್ಞಾನಿಗಳಿಗೆಲ್ಲ) ತಿಳಿದಿದೆ ; ಎನ್ನ ವಿದ್ಯವ = ನನ್ನ ವಿದ್ಯೆಯನ್ನು (ಸ್ತ್ರೀಕುಶಲತೆ-ಯನ್ನು), ನಿನಗೆ, ಈ ಸದ್ಯಕ್ಕೆ = ಈ ಕ್ಷಣದಲ್ಲಿ[೧] ತೋರುವೆ = ತೋರಿಸುತ್ತೇನೆ ; ನಿದ್ರೆ ಕೆಡುವಂಥ = ನಿದ್ರೆ ಬರದಂಥ, ಬುದ್ಧಿ ನಿನ್ನದು = (ಕಾಮಪೀಡಿತವಾದ) ಮನಸ್ಸು ನಿನ್ನದು ; (ಕಾಮವಶರಿಗೆ ನಿದ್ರೆಯಿಲ್ಲ - ಲಜ್ಜೆಯಿಲ್ಲ - ಭಯವಿಲ್ಲ) ; ಸದ್ದು ಮಾಡದೆ = ಶಬ್ದ ಮಾಡದೆ, ಮುದ್ದಿಸೆನ್ನ = ನನ್ನನ್ನು ಚುಂಬಿಸು ; (ಮುಂದೇನಾಯಿತೆಂದರೆ),

ಬುದ್ಧಿವಂತೆ ಎಂದು = ನೀನು ಬಹುಜಾಣೆ, ಎಂದು ಹೇಳಿ ಹರ್ಷಿಸಿ, (ಕೀಚಕನು), ವದ್ದಿಗೆ = ಮಗ್ಗಲಿಗೆ (ಹತ್ತಿರಕ್ಕೆ), ಹೋಗಲು, ಸಮೀರಜ = ವಾಯುಪುತ್ರನಾದ ಭೀಮ-ಸೇನನು, ಎದ್ದು = (ಮಂಚದಿಂದ) ಮೇಲೆದ್ದು, ಗುದ್ದಲು = ಮುಷ್ಟಿಯಿಂದ ಹೊಡೆಯಲು (ಕೀಚಕನಿಗೆ ತಲೆಯ ಮೇಲೆ ಗುದ್ದಲು), ಕೀಚಕ = ಕೀಚಕನು (ಹೊಟ್ಟೆಯಲ್ಲಿ ತಲೆ ಸಿಕ್ಕಿ ಮೃತನಾಗಿ), ಭೂಮಿಲಿ ಬಿದ್ದನು = ಭೂಮಿಯ ಮೇಲೆ ಬಿದ್ದನು ; ಗೆದ್ದೆನು ಎನುತ = ತನ್ನ ಕೆಲಸವಾಯಿತೆಂದು (ಕೀಚಕನ ವಧೆಯ ರೂಪದ ಶ್ರೀಹರಿಸೇವೆಯು ಸಲ್ಲಿತೆಂದು) ಅನಿರುದ್ಧನ ಸ್ಮರಿಸುತ = (ನೀನೇ ನನ್ನಲ್ಲಿ ನಿಂತು ಮಾಡಿಸಿದ ಈ ಕಾರ್ಯದಿಂದ ಸುಪ್ರೀತನಾಗೆಂದು ಶ್ರೀಕೃಷ್ಣನನ್ನು ಸ್ಮರಿಸುತ್ತ, ಭೀಮ ಎದ್ದ = (ಬಿದ್ದ ಕೀಚಕನ ದೇಹವನ್ನು ಮುದ್ದೆ ಮಾಡಿ) ಭೀಮ ಎದ್ದು ಹೊರಟನು.

**ಕೆಟ್ಟ ಕೀಚಕ ತಾ ಕೊಟ್ಟ ಲಾಂಛನದಿ**
**ಬೆಟ್ಟದಂಥ ದೇಹ ಬಿಟ್ಟ ನಿನ್ನವನ**
**ಪಟ್ಟಾಗಿ ತೋರುವೆ ದೃಷ್ಟಿಸು ಎನ್ನಲು**
**ಭ್ರಷ್ಟನ ನೋಡುವುದೇನೆಂದಳು**

**ಕೊಟ್ಟ ಭಾಷೆಯು ಈಗ ಮುಟ್ಟಿತು ನಿನಗೆ**
**ಕೃಷ್ಣನ ದಯದೀ ಕಷ್ಟವು ಹಿಂಗಿತು**
**ಪಟ್ಟಣಕೀ ಸುದ್ದಿ ಮುಟ್ಟದ ಮುಂಚೆಯೆ**
**ಗುಟ್ಟಲಿ ಪೋಗುವೆ ಘಟ್ಟನೆಂದ** **॥ ೨೨ ॥**

**ಅರ್ಥ:—** ಕೆಟ್ಟಕೀಚಕ = ದುಷ್ಟಕೀಚಕನು, ಕೊಟ್ಟ ಲಾಂಛನದಿ = (ನೀನು)

---

೧. ಸಮಸ್ತ ವಿದ್ಯೆಗಳಿಂದ ಪೂರ್ಣನಾದ ಶ್ರೀಭೀಮಸೇನನು, ಆ ಕಾಲದಲ್ಲಿ ದುಷ್ಟರನ್ನು ನಿಗ್ರಹಿಸುವ ಬಲಪರಾಕ್ರಮಗಳನ್ನು (ದುಷ್ಟರೊಡನೆ ಹೋರಾಡುವ ಕುಶಲತೆಯನ್ನು) ಪ್ರಕಟಿಸುವನೆಂಬ ಅರ್ಥವನ್ನು 'ಎನ್ನ ವಿದ್ಯವ ತೋರುವೆ' ಎಂಬುದಕ್ಕೆ ತಿಳಿಯಬೇಕು.

ಅವನಿಗೆ ಕೊಟ್ಟ ಗುರ್ತಿನಂತೆ (ಸೂಚನೆಯಂತೆ, ನಿನ್ನ ಸಂಗ ದೊರೆಯುವುದೆಂಬ ಉತ್ಸಾಹದಿಂದ ಅಲ್ಲಿಗೆ ಬಂದು), ತಾ = ತಾನು, ಬೆಟ್ಟದಂಥ[೧] = (ತನ್ನ) ದೊಡ್ಡ ರಾಕ್ಷಸ-ದೇಹವನ್ನು, ಬಿಟ್ಟ = ತ್ಯಜಿಸಿದನು ; ನಿನ್ನವನ = ನಿನ್ನೊಡನೆ ಸರಸವನ್ನಿಚ್ಛಿಸಿದ (ನಿನ್ನ ಮನನೋಯಿಸಿದ) ಆ ದುರುಳನನ್ನು, ಪಟ್ಟಾಗಿ ತೋರುವೆ = ಚೆನ್ನಾಗಿ ತೋರಿಸುತ್ತೇನೆ, ದೃಷ್ಟಿಸು = (ಅವನ ಗತಿ ಏನಾಗಿದೆ ಎಂಬುದನ್ನು) ನೋಡು, ಎನ್ನಲು = ಎಂದು ಭೀಮ-ಸೇನನು) ಹೇಳಲು, ಭ್ರಷ್ಟನ = ಆ ಪತಿತನನ್ನು (ಪಾಪಿ ಕೀಚಕನನ್ನು), ನೋಡುವುದೇ-ನೆಂದಳು = ನೋಡುವುದೇಕೆಂದಳು (ದ್ರೌಪದಿ).

ನಿನಗೆ ಕೊಟ್ಟ ಭಾಷೆಯು = (ಆ ದುರುಳನನ್ನು ಕೊಂದು ಯಮನಲ್ಲಿಗೆ ಕಳುಹಿಸುವೆನೆಂದು) ನಿನಗೆ ಕೊಟ್ಟ ಮಾತು (ನಿನ್ನೆದುರಿಗೆ ಮಾಡಿದ ಪ್ರತಿಜ್ಞೆಯು), ಈಗ ಮುಟ್ಟಿತು = ಈಗ ಸಂದಿತು (ಪೂರ್ಣವಾಯಿತು – ಸಾಧಿಸಲ್ಪಟ್ಟಿತು) ; ಕೃಷ್ಣನ ದಯದಿ = ಕೃಷ್ಣನ ಕೃಪೆಯಿಂದ ; ಈ ಕಷ್ಟವು (ಈ ದುರುಳನ ಕಾಟದಿಂದ ಪ್ರಾಪ್ತವಾಗಬಹುದಾದ ಮಾನಭಂಗರೂಪದ ಭಯವು) ಈ ಅಸಹ್ಯವಾದ ಪರಿಸ್ಥಿತಿಯು, ಹಿಂಗಿತು = ತಪ್ಪಿತು ; (ಕೃಷ್ಣನ ದಯದಿಂದಲೇ ಕೊಟ್ಟ ಭಾಷೆಯು ಈಗ ಮುಟ್ಟಿತು); ಈ ಸುದ್ದಿ[೨] = ಕೀಚಕರ ಮರಣದ ಸುದ್ದಿಯು (ವಾರ್ತೆಯು), ಪಟ್ಟಣಕೆ ಮುಟ್ಟದ ಮುಂಚೆಯೆ = ಪಟ್ಟಣವನ್ನು ಮುಟ್ಟುವ ಮೊದಲೇ, ಗುಟ್ಟಿಲಿ = ರಹಸ್ಯವಾಗಿ (ಯಾರಿಗೂ ಕಾಣದಂತೆ), ಥಟ್ಟನೆ ಪೋಗುವೆ = ಜಾಗ್ರತೆ (ನನ್ನ ಕಾರ್ಯಸ್ಥಾನವಾದ ಅಡಿಗೆಶಾಲೆಗೆ) ಹೋಗುತ್ತೇನೆ, ಎಂದ = (ಭೀಮಸೇನನು) ಎಂದನು.

---

೧. ಕಾಮರೂಪಿಗಳಾದ ದೈತ್ಯರಾಕ್ಷಸರು ಉಗ್ರಸ್ವರೂಪರು. ಅವರು ಮರಣಕಾಲದಲ್ಲಿ ತಮ್ಮ ಮೂಲರೂಪವನ್ನೇ ಹೊಂದಿ, ದೇಹತ್ಯಾಗಮಾಡುವರೆಂಬುದು ಶಾಸ್ತ್ರಸಿದ್ಧ ಪ್ರಮೇಯ ; ಪೂತನಿ, ತೃಣಾವರ್ತ ಮೊದಲಾದ ದೈತ್ಯರು ಶ್ರೀಕೃಷ್ಣನಿಂದ ಸಂಹೃತರಾದಾಗ, ಅವರ ಪರ್ವತಾಕಾರದ ದೇಹಗಳನ್ನು ಕಂಡು ಗೋಕುಲದ ಪ್ರಜೆಗಳು ಆಶ್ಚರ್ಯ ಚಕಿತರಾಗಿದ್ದಾರೆ.

೨. ಸೈರಂಧ್ರಿಯ ನಿಮಿತ್ತದಿಂದ, ಆಕೆಯ ಪತಿಯಾದ ಗಂಧರ್ವನಿಂದ ಕೀಚಕನು ಕೊಲ್ಲಲ್ಪಟ್ಟನೆಂದು ತಿಳಿದ, ಕೀಚಕನ (೧೦೫) 'ಪಂಚೋತ್ತರಶತ' ಅನುಜರು, ಕೀಚಕನ ದೇಹದೊಂದಿಗೆ ಸೈರಂಧ್ರಿ ಯನ್ನು ದಹನಮಾಡುವುದಾಗಿ ಆಕೆಯನ್ನು ಬಂಧಿಸಿ ತೆಗೆದುಕೊಂಡು ಹೋಗುತ್ತಿರಲು, ಶ್ರೀಭೀಮಸೇನನು ರುದ್ರವರದಿಂದ ಅವಧ್ಯರಾದ ಅವರೆಲ್ಲರನ್ನೂ ಲೀಲೆಯಿಂದ ಸಂಹರಿಸಿ ದ್ರೌಪದಿಯನ್ನು ಬಿಡಿಸಿ, ''ಈ ಸುದ್ಧಿಯು'' ಪಟ್ಟಣವನ್ನು ಮುಟ್ಟುವ ಮೊದಲು, ಸ್ಮಶಾನಮಾರ್ಗದಿಂದ ಶೀಘ್ರವಾಗಿ ಬಂದು ತನ್ನ ನಿತ್ಯ ಸ್ಥಳವನ್ನು ಸೇರುತ್ತಾನೆ. ಭಾರತೋಕ್ತವಾದ ಈ ನಿರೂಪಣೆಯ ಅರ್ಥವಿಶೇಷ ವನ್ನು ''ಪಟ್ಟಣಕೀ ಸುದ್ದಿ ಮುಟ್ಟದ ಮುಂಚೆಯೇ'' ಎಂಬುದರಿಂದ ತಿಳಿಯಬಹುದು.

ಅರಸಿ ನಿನ್ನೊಳು ಸರಸ ಬೇಕೆಂಬ
ಪುರುಷನ ಜೀವದೊರಸೆ ಕೊಂದೆನು
ಹರುಷದೀ ಪುರದ ಅರಸು ಎಮ್ಮನು
ಇರಿಸಿಕೊಂಡೊಂದು ವರುಷವಾಯಿತು

ಬೆರಸಿದ ಸ್ನೇಹಕ್ಕೆ ವಿರಸಬಂತೆಂದು
ಸರಸಿಜಾಕ್ಷಿಯು ಕರೆಸಿ ನಿನ್ನೊಳ-
ಗಿರಸದಿರೆ ಹಯವದನನ ಪದಪದ್ಮ
ಸ್ಮರಿಸುತ ಗದೆಯನು ಧರಿಸುವೆನು ॥ ೨೩ ॥

**ಅರ್ಥ:—** ಅರಸಿ = ಹೇ ದ್ರೌಪದಿ ! ನಿನ್ನೊಳು = ನಿನ್ನೊಂದಿಗೆ, ಸರಸ ಬೇಕೆಂದು = ಸರಸವನ್ನು (ಪ್ರೇಮಚೇಷ್ಟೆಗಳನ್ನು) ಅಪೇಕ್ಷಿಸಿದ, ಪುರುಷನ = ಪುರುಷನನ್ನು, ಜೀವದೊರೆಸೆ = ಜೀವಸಹಿತವಾಗಿ, ಕೊಂದೆನು = ಸಂಹರಿಸಿದೆನು (ದ್ವಂದ್ವಯುದ್ಧದಲ್ಲಿ ಕೊಂದೆನು = ಕಪಟದಿಂದ ಕೆಡವಿ ನಂತರ ಕೊಲ್ಲಲಿಲ್ಲ) ; ಈ ಪುರದ ಅರಸು = ಈ ಪಟ್ಟಣದ ರಾಜನು, ಹರುಷದಿ = ಸಂತೋಷದಿಂದ, ಎಮ್ಮನು = ನಮ್ಮನ್ನು (ದ್ರೌಪದೀ ಸಹಿತ ಪಂಚಪಾಂಡವರನ್ನು), ಇರಿಸಿಕೊಂಡು = ತನ್ನಲ್ಲಿಟ್ಟುಕೊಂಡು, ಒಂದು ವರುಷ-ವಾಯಿತು = ಒಂದು ವರುಷವಾಗುತ್ತಾ ಬಂತು (ಅಜ್ಞಾತವಾಸದ ಒಂದು ವರ್ಷ ಮುಗಿಯಲು ಕೆಲವೇ ದಿನಗಳು ಉಳಿದಿವೆ);

ಬೆರಸಿದ ಸ್ನೇಹಕ್ಕೆ = (ಇಷ್ಟು ಕಾಲ) ಕೂಡಿ ಇದ್ದದ್ದರಿಂದ ಬೆಳೆದ ಸ್ನೇಹಕ್ಕೆ ವಿರಸ-ಬಂತೆಂದು = (ನಿನ್ನ ಪತಿಗಳೆಂಬ ಗಂಧರ್ವರಿಂದ ಉಂಟಾಯಿತೆಂಬ ಕೀಚಕರ ವಧೆ-ಯಿಂದ) ವಿರೋಧವಾಯಿತೆಂದು (ಭಂಗವುಂಟಾಯಿತೆಂದು), ಸರಸಿಜಾಕ್ಷಿಯು = ರಾಣಿ ಸುದೇಷ್ಣೆಯು, ಕರೆಸಿ = ನಿನ್ನನ್ನು ಕರೆಸಿ, ನಿನ್ನ ಒಳಗಿರಸದಿರೆ = ನಿನ್ನನ್ನು ತನ್ನ ಅಂತಃಪುರದಲ್ಲಿ ಎಂದಿನಂತೆ ಕೆಲಸದಲ್ಲಿ ಇಟ್ಟುಕೊಳ್ಳದಿದ್ದರೆ, (ಕೆಲಸಬಿಡಿಸಿ ಹೋಗೆಂದರೆ), **ಹಯವದನನ** = ಶ್ರೀಕೃಷ್ಣನ, ಪದಪದ್ಮ ಸ್ಮರಿಸುತ = ಪಾದಕಮಲಗಳನ್ನು ಸ್ಮರಿಸುತ್ತ, ಗದೆಯನು = (ನನ್ನ) ಗದೆಯನ್ನು, ಧರಿಸುವೆನು = ಧರಿಸುತ್ತೇನೆ.[೧]

**‘ಆಚಾರ್ಯಾಃ ಶ್ರೀಮದಾಚಾರ್ಯಾಃ ಸಂತು ಮೇ ಜನ್ಮಜನ್ಮನಿ’**

---

೧. ಕೀಚಕನ ವಧೆಯಾದಾಗ ಅಜ್ಞಾತವಾಸದ ಅವಧಿಯು ಮುಗಿಯಲು ೧೩ ದಿನಗಳು ಮಾತ್ರ ಉಳಿದಿತ್ತು, ಶ್ರೀಭೀಮಸೇನನು, ಸುದೇಷ್ಣೆಯು ದ್ರೌಪದಿಯನ್ನು ಆ ಕೂಡಲೆ ಹೊರಗೆ ಹಾಕಿದರೆ,

(ಹಿಂದಿನ ಪುಟದ ಅಡಿ ಟಿಪ್ಪಣಿ ಮುಂದುವರೆದಿದೆ)

---

ಗದೆಯನ್ನು ಧರಿಸುವುದಾಗಿ ಹೇಳಿದ್ದರಿಂದಲೋ ಎಂಬಂತೆ, ದ್ರೌಪದಿಯು ಇನ್ನು ೧೩ ದಿನಗಳು ಮಾತ್ರ ನಿನ್ನಲ್ಲಿರಲು ಅವಕಾಶಕೊಡು, ನಂತರ ನೀನು ಇರೆಂದರೂ ಇರುವುದಿಲ್ಲವೆಂದು ಸುಧೇಷ್ಣೆಯಲ್ಲಿ ಹೇಳಿ ಒಪ್ಪಿಸುತ್ತಾಳೆ. ಸುದೇಷ್ಣೆಯು, ಆಕೆಯ ಇಷ್ಟಕ್ಕೆ ವಿರೋಧವಾಗಿ ನಡೆಯಲು (ಆಕೆಯ ಪತಿಗಳೆಂಬ ಗಂಧರ್ವರ) ಭಯದಿಂದ ಒಪ್ಪಿಕೊಳ್ಳುತ್ತಾಳೆ, ಅಜ್ಞಾತವಾಸದ ಅವಧಿಯನ್ನು ಚೆನ್ನಾಗಿ ಬಲ್ಲ ಸರ್ವಜ್ಞನಾದ ಶ್ರೀಭೀಮಸೇನನು. ಗದೆಯನ್ನು ಧರಿಸಿ ಆ ಅವಧಿಯೊಳಗೆ ಪ್ರಕಟನಾಗಿ, ಧರ್ಮರಾಜನ ಪ್ರತಿಜ್ಞೆಯಂತೆ ಪುನಃ ಅರಣ್ಯವಾಸ ಅಜ್ಞಾತವಾಸಗಳನ್ನು ಅನುಭವಿಸುವಂತೆ ಮಾಡಲು ದುರ್ಯೋಧನನಿಗೆ ಅವಕಾಶವನ್ನುಂಟುಮಾಡುವ ವಿವೇಚನೆ ಇಲ್ಲದ ಧಾಷ್ಟ್ರ್ಯತನದಿಂದ ವರ್ತಿಸುವವನಲ್ಲ. ಸರ್ವಜ್ಞಳಾದ ದ್ರೌಪದಿಯೂ ಗದೆಯನ್ನು ಧರಿಸುತ್ತೇನೆಂಬ ಶ್ರೀ ಭೀಮಸೇನನ ಮಾತನ್ನು ನಿಮಿತ್ತಮಾಡಿಕೊಂಡು, ಕೂಡಲೆ ಪ್ರಕಟನಾಗುವನೆಂಬ ಭಯದಿಂದಲೋ ಎಂಬಂತೆ ವರ್ತಿಸುತ್ತಾಳೆ.

॥ ಶ್ರೀಕೃಷ್ಣಾರ್ಪಣಮಸ್ತು ॥

---